(9)




# ಅಚಲ

ಸಂಪುಟ 11 | ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ | ಜನವರಿ 1997
ಸಂಚಿಕೆ 6 | ದ್ವೈಮಾಸಿಕ | ಬೆಂಗಳೂರು

ಸಂಪಾದಕ ಮಂಡಲಿ
ಎನ್. ಗಾಯತ್ರಿ
ನೇಮಿಚಂದ್ರ, ದೇವಿ
ಡಾ|| ಬಿ.ಎನ್. ಸುಮಿತ್ರಾಬಾಯಿ
ಶಾಂತಾ ನಾಗರಾಜ್

ಪ್ರಕಾಶಕರು
ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ
ಬೆಂಗಳೂರು

ಬೆಲೆ (ರೂಗಳಲ್ಲಿ)
ಬಿಡಿ ಪ್ರತಿ - 4 ರೂ.
ವಾರ್ಷಿಕ ಚಂದಾ - 25 ರೂ.
ಅಜೀವ ಚಂದಾ - 200 ರೂ.
(ಸಂಸ್ಥೆಗಳಿಗೆ) - 250 ರೂ.

ಚಂದಾ ಮತ್ತು ಲೇಖನಗಳನ್ನು
ಕಳುಹಿಸುವ ವಿಳಾಸ

ಸಂಪಾದಕರು
ಅಚಲ
ಬಿ-30, ರಿಸರ್ವ್ ಬ್ಯಾಂಕ್ ಸ್ಟಾಫ್ ಕ್ವಾರ್ಟರ್ಸ್
1ನೇ ಮುಖ್ಯರಸ್ತೆ, 9ನೇ ಕ್ರಾಸ್
ವಿಜಯನಗರ ಎರಡನೇ ಹಂತ,
ಬೆಂಗಳೂರು - 40

## ಒಳಪುಟಗಳಲ್ಲಿ

## ವಿಶ್ವಸುಂದರಿಗೆ ಮಾರ್ಗದರ್ಶಿ

ಭಾರತದರ್ಶನ ಮಾಡುವಾ
ಬನ್ನಿ ಬಂಧುಗಳೇ
ದಿಲ್ಲಿಯಿಂದ ಅಡಿಯಿಡೋಣ.
ಇಲ್ಲಿ ಸುಲ್ತಾನರ ಬೇಗಂಗಳು
ಚಕ್ರವರ್ತಿಗಳ ಪಟ್ಟ ಮಹಿಷಿಯರು
ಆಂಗ್ಲರ ಮೇಮ್‌ಸಾಬುಗಳು
ನಕ್ಕರೋ ನಲಿದರೋ ಗೊತ್ತಿಲ್ಲ.
ಮೊನ್ನೆ ಮೊನ್ನೆ ಮಾತ್ರ ಶಾಬಾನೋ ಎನ್ನುವೊಂದು ಜೀವ
ಬಿಟ್ಟ ಗಂಡನಿಂದ ಬಿಟ್ಟಿ ಕಿಲುಬುಕಾಸನ್ನೂ
ಪಡೆಯದೆ, ಸುಪ್ರೀಂಕೋರ್ಟಿನ ನೀತಿಯೊಳಗೆ
ಸತ್ತೇ ಹೋಯಿತು ಪಾಪ!

ಜಯಪುರವೆನ್ನುವ ಮಹಾನ್
ಜಾನಪದರ ನೆಲದಲ್ಲಿ
ಸೊಸೆಯನ್ನು ಚಿತೆಗೇರಿಸಿ
'ಸತಿ' ಮಾಡಿಯೂ 'ನಿರ್ದೋಷಿ'
ಎನಿಸಿಕೊಂಡ ಮಾವ, ಮೈದುನರನ್ನು
ಒಮ್ಮೆ ಸಂದರ್ಶಿಸುವುದಿಲ್ಲವೇ
ನೀವು?

ಮುಂದೆ ಬನ್ನಿ ಇತ್ತ ಕಡೆ
ಇದು ಮಹಾರಾಷ್ಟ್ರದ ಜಳಗಾಂವ್
ಹೆಸರಿನ ಪವಿತ್ರ ನೆಲ
ಇಲ್ಲಿ ಶಾಲೆ
ಹುಡುಗಿಯರೆಲ್ಲ
ರಾಜಕಾರಣಿಗಳ ಮಧುಮಂಚಕೆ
ತಳ್ಳಿಸಿಕೊಂಡಿದ್ದಾರೆ; ಆ ಬಾಡಿದ
ಹೂಗಳಿಗೆ ನಿಮ್ಮ ಕೆಂಪು ಬೇಲಿಯ
ನಗುವನ್ನು ಚುಮುಕಿಸಿ ಹೊಸದುಗೊಳಿಸಿ.

ಇಲ್ಲಿ ಹಸುಮಕ್ಕಳ ಮದುವೆ
ತಪ್ಪಿಸಿದ ಸಮಾಜ ಸೇವಕಿಗೆ
ಸಿಕ್ಕ ಪುರಸ್ಕಾರ - ಮುಖಂಡರ
ಗುಂಪು ಅತ್ಯಾಚಾರ!?

ಭಾರತದ ಪುಣ್ಯಭೂಮಿ
ನೊಂದ ಮಾನಿನಿಯರಿಂದ ಕಪ್ಪಾಗಿದೆ
ಹತಭಾಗಿನಿಯರಿಂದ ಕೆಂಪಾಗಿದೆ
ಈ ಸ್ಪರ್ಧೆಯಿಂದ ಬಿಳುಚಿಕೊಂಡಿದೆ
ನಮ್ಮ ಮುಖಂಡರಿಗೆ ಮಾತ್ರ
ರಂಗುರಂಗಾಗಿ ಕಾಣುತಿದೆ.

ಮಂಗಳೂರಿನ ಸಾಗರದಲೆಗಳ
ಘನರವದೊಳಗೆ ಆಶ್ರಮದ
ಶೋಷಿತ ಅನಾಥ ಬಾಲೆಯರ
ನಿಟ್ಟುಸಿರುಗಳು ಕೇಳಿಸುವುದೇ ಇಲ್ಲ.
ತಿಪಟೂರಿನ ತೆಂಗುಕಂಗುಗಳ
ನಡುವೆ ಶಶಿಕಲಾರಂಥ ಜೀವಿಯ
ನಿಡುಸುಯಿಲು ದಾಖಲಾಗುವುದೇ ಇಲ್ಲ.
ಇಂಥದ್ದು ಒಂದಲ್ಲ, ಎರಡಲ್ಲ, ನೂರು ಸಾವಿರ
ಲಕ್ಷ ದಾಟಿದ ಕೇಸುಗಳಲ್ಲಿ ಅಪರಾಧಿಗಳಿಗೆ
ಶಿಕ್ಷೆ ಆಗುವುದೇ ಇಲ್ಲ.

ಮರೆಯದಿರಿ ವಿಶ್ವಭಗಿನಿಯರೇ
ನನ್ನ ಈ ನೆಲದ ಮಣ್ಣಿನ
ಕಣಕಣದಲ್ಲಿ ನಿಷ್ಪಾಪಿ ಹೆಣ್ಣುಗಳ
ಅಸಂಖ್ಯ ಜೀವವಿದೆ, ಜೋಕೆ!
ಪದಾಘಾತದಿಂದ ಅವುಗಳನ್ನು
ನಲುಗಿಸಬೇಡಿ ದಮ್ಮಯ್ಯ
ಎಚ್ಚರಿಕೆಯಿಂದ ಅಡಿಯಿಡಿ
ಜೀವವನ್ನು ಮಣ್ಣು ಮಾಡುವ
ಕಬಂಧ ಬಾಹು ಅಪ್ಪಿಬಿಟ್ಟೀತು
ನಿಮ್ಮನ್ನು ನಿಮ್ಮ
ನಗುವನ್ನು

- ಶಾಂತಾ ನಾಗರಾಜ್

## ದೋಹದ !

ಸುಂದರಿಯರ 'ದೋಹದ ಕಾರ್ಯ'ದಿಂದ ತಮ್ಮೂರು
ನಳನಳಿಸುವುದೆಂದು ಕನವರಿಸಿತು ಬೆಂಗಳೂರು
ಮರುದಿನ ಬೀದಿಯ ಕುಪ್ಪೆಗಳೆಲ್ಲ ಅಲ್ಲಲ್ಲೆ
ತುಳುಕುವುದ ಕಂಡು ಜನ ಮರುಗಿದರು ತಮ್ಮಲ್ಲೇ

- ಹೇಮಲತಾ ಮಹಿಷಿ

## ನೀರಾವರಿಗೆ ಕಾಯಕಲ್ಪ, ನಿತ್ಯ ಹಸಿರಿಗೆ ಸಂಕಲ್ಪ

ಕಳೆದ ಎರಡು ವರ್ಷಗಳಲ್ಲಿ ರಾಜ್ಯದ ಭಾರಿ ಮತ್ತು ಮಧ್ಯಮ ನೀರಾವರಿ ಯೋಜನೆಗಳಲ್ಲಿ ರೂ. 1,145,17 ಕೋಟಿ ವೆಚ್ಚ ಮಾಡಿದ್ದು 70,335 ಹೆಕ್ಟೇರ್ ಹೆಚ್ಚುವರಿ ಪ್ರದೇಶಕ್ಕೆ ನೀರಾವರಿ ಸೌಲಭ್ಯ ಕಲ್ಪಿಸಲಾಗಿದೆ.

ಬೆಳಗಾವಿ ಜಿಲ್ಲೆ : - ಮಾರ್ಕಂಡೇಯ ಯೋಜನೆಗೆ ರೂ. 120 ಕೋಟಿ ವೆಚ್ಚಕ್ಕೆ ಅನುಮೋದನೆ. ಈ ಯೋಜನೆಯಿಂದ 23, 760 ಹೆಕ್ಟೇರ್ ಪ್ರದೇಶಕ್ಕೆ ನೀರಾವರಿ ಸಾಮರ್ಥ್ಯ.

ಹಿಪ್ಪರಗಿ ಯೋಜನೆಗೆ ಕಳೆದ ಎರಡು ವರ್ಷಗಳಲ್ಲಿ ರೂ. 580 ಲಕ್ಷ ವೆಚ್ಚ. 2000ನೇ ಇಸವಿಯೊಳಗೆ ಯೋಜನೆಯ ಪೂರ್ಣಗೊಳಿಸುವಿಕೆ. 56,690 ಹೆಕ್ಟೇರ್ ಪ್ರದೇಶಕ್ಕೆ ನೀರಾವರಿ ಸೌಲಭ್ಯ.

ಘಟಪ್ರಭಾ ಹಂತ 3ರ ಯೋಜನೆಗೆ ಕಳೆದ ಎರಡು ವರ್ಷಗಳಲ್ಲಿ ರೂ. 62.69 ಕೋಟಿ ವೆಚ್ಚ ಮಾಡಿ ಕಡಬಗಟ್ಟಿ ಸುರಂಗ ಮಾರ್ಗವನ್ನು ನಿರ್ಮಿಸಿ ನೀರು ಬಿಡುವ ಮೂಲಕ 5,724 ಹೆಕ್ಟೇರ್ ಪ್ರದೇಶಕ್ಕೆ ನೀರಾವರಿ.

ದೂಧಗಂಗಾ ಅಂತರರಾಜ್ಯ ಯೋಜನೆಯ ಮಹಾರಾಷ್ಟ್ರ ಸರ್ಕಾರದೊಂದಿಗೆ ಕರಡು ಒಪ್ಪಂದ. ಈ ಯೋಜನೆಯ ಬೆಳಗಾವಿ ಜಿಲ್ಲೆಯ 12,986 ಹೆಕ್ಟೇರ್ ಜಮೀನಿಗೆ ನೀರು ಪೂರೈಕೆ. ಮಲಪ್ರಭಾ ಯೋಜನೆಗೆ ಕಳಸ ನಾಲಾದಿಂದ ನೀರು ಹರಿಸಲು ಗೋವಾ ಸರ್ಕಾರದೊಂದಿಗೆ ಸಮಾಲೋಚನೆ.

ಬೀದರ ಜಿಲ್ಲೆ :- ಕಾರಂಜಾ ಯೋಜನೆಗೆ ಕಳೆದ ಎರಡೇ ವರ್ಷಗಳಲ್ಲಿ ರೂ. 3,414 ಲಕ್ಷ ವೆಚ್ಚ ಮಾಡಿ 4,950 ಹೆಕ್ಟೇರ್ ಪ್ರದೇಶಕ್ಕೆ ನೀರಾವರಿ ಸಾಮರ್ಥ್ಯ. ಈ ಯೋಜನೆಯನ್ನು ತ್ವರಿತವಾಗಿ ಪೂರ್ಣಗೊಳಿಸಲು ಕೇಂದ್ರದ ಸಹಾಯ ಧನಕ್ಕೆ ಹಾಗೂ ನಬಾರ್ಡ್ ಸಾಲಕ್ಕಾಗಿ ತೀವ್ರ ಪ್ರಯತ್ನ.

ಚುಳ್ಕಿನಾಲಾ ಯೋಜನೆಯನ್ನು ಸೆಪ್ಟೆಂಬರ್ 97ರ ವೇಳೆಗೆ ಮುಗಿಸಲು ಸಂಕಲ್ಪ ಕಳೆದ ಎರಡು ವರ್ಷಗಳಲ್ಲಿ ರೂ. 911 ಲಕ್ಷ ವೆಚ್ಚ ಹಾಗೂ 800 ಹೆಕ್ಟೇರ್ ಪ್ರದೇಶಕ್ಕೆ ನೀರಾವರಿ ಸಾಮರ್ಥ್ಯ. ನಬಾರ್ಡ್‌ನಿಂದ ನೆರವು.

ಬಿಜಾಪುರ ಜಿಲ್ಲೆ :- ಕೃಷ್ಣಾ ಮೇಲ್ದಂಡೆ ಯೋಜನೆಯಡಿ ರೂ. 86.80 ಕೋಟಿ ವೆಚ್ಚದಲ್ಲಿ 4 ಏತ ನೀರಾವರಿ ಯೋಜನೆಗಳ ಹೆಡ್‌ವರ್ಕ್ಸ್ ಕಾಮಗಾರಿಗಳ ಆರಂಭ. 87, 420 ಹೆಕ್ಟೇರ್ ಪ್ರದೇಶಕ್ಕೆ ನೀರಾವರಿ ಸಾಮರ್ಥ್ಯ ಕಲ್ಪಿಸುವ ಗುರಿ.

ಗುಲ್ಬರ್ಗಾ ಜಿಲ್ಲೆ :- ರಾಜ್ಯದ ಬೃಹತ್ ಯೋಜನೆ ಕೃಷ್ಣಾ ಮೇಲ್ದಂಡೆ ಯೋಜನೆಯಾಗಿದ್ದು ಇದಕ್ಕಾಗಿ ಎರಡು ವರ್ಷಗಳಲ್ಲಿ ರೂ. 400 ಕೋಟಿ ಅನುದಾನ. 95-96 ಮತ್ತು 96-97 ಸಾಲಿನಲ್ಲಿ ಇದುವರೆಗೆ ರೂ. 398 ಕೋಟಿಗಳ ವೆಚ್ಚ. ಕಳೆದ ಎರಡು ವರ್ಷಗಳಲ್ಲಿ 57,553 ಹೆಕ್ಟೇರ್ ಪ್ರದೇಶಕ್ಕೆ ಹೆಚ್ಚುವರಿ ನೀರಾವರಿ ಸೌಲಭ್ಯ. ಈ ಯೋಜನೆಯನ್ನು ತ್ವರಿತಗೊಳಿಸಲು ಕೃಷ್ಣಾಭಾಗ್ಯ ಜಲನಿಗಮದಿಂದ 95-96ನೇ ಸಾಲಿನಲ್ಲಿ ರೂ. 180 ಕೋಟಿ ಮತ್ತು 96-97ನೇ ಸಾಲಿನ ಇದುವರೆಗೆ ರೂ. 300-00 ಕೋಟಿಗಳ ಸಂಗ್ರಹಣೆ. ಇದೇ ಸಾಲಿನಲ್ಲಿ ರೂ. 300 ಕೋಟಿಗಳ ಸಂಗ್ರಹಣೆಯ ಗುರಿ. ಕೃಷ್ಣಾ ಭಾಗ್ಯ ಜಲ ನಿಗಮದ ವತಿಯಿಂದ ಇದುವರೆಗೆ ರೂ. 287 ಕೋಟಿ ಆರ್ಥಿಕ ಪ್ರಗತಿಯ ಸಾಧನೆ. 96-97ನೇ ಸಾಲಿನಲ್ಲಿ ರೂ. 114 ಕೋಟಿ ಕೇಂದ್ರ ಸಾಲದ ನೆರವು.

ಬೆಣ್ಣೆತೋರಾ ಯೋಜನೆಗೆ ಕಳೆದ ಎರಡು ವರ್ಷಗಳಲ್ಲಿ ರೂ. 1,579 ಲಕ್ಷಗಳ ವೆಚ್ಚ. ನಬಾರ್ಡ್ ಸಾಲದ ನೆರವು. ಯೋಜನೆಯು ಪೂರ್ಣಗೊಂಡಾಗ 20,236 ಹೆಕ್ಟೇರ್ ಪ್ರದೇಶವು ನೀರಾವರಿ ಸಾಮರ್ಥ್ಯ ಪಡೆಯುವುದು.

ಗಂಡೋರಿನಾಲಾ ಯೋಜನೆ ಕೆಲಸ ಪುನರಾರಂಭ. ಕಳೆದ ಎರಡು ವರ್ಷಗಳಲ್ಲಿ ರೂ. 466 ಲಕ್ಷಗಳ ವೆಚ್ಚ. 8,094 ಹೆಕ್ಟೇರ್ ಪ್ರದೇಶಕ್ಕೆ ನೀರಾವರಿ ಸೌಲಭ್ಯಕ್ಕೆ ಯೋಜನೆ.

ಅಮರ್ಜ ಯೋಜನೆಗೆ ನಬಾರ್ಡ್ ಸಾಲದ ನೆರವು ಪಡೆದು ಸೆಪ್ಟೆಂಬರ್ 97ರ ವೇಳೆಗೆ ಯೋಜನೆಯ ಪೂರ್ಣಗೊಳಿಸುವಿಕೆ.

ಮುಲ್ಲಾಮಾರಿ ಕೆಳದಂಡೆ ಯೋಜನೆಗೆ ನಬಾರ್ಡ್ ಸಾಲದ ನೆರವು ಪಡೆದಿದ್ದು 97-98ನೇ ಸಾಲಿನಲ್ಲಿ ಪೂರ್ಣ.

ಭೀಮ ಏತನೀರಾವರಿ ಯೋಜನೆಗೆಕಳೆದಎರಡು ವರ್ಷಗಳಲ್ಲಿ ರೂ. 112 ಲಕ್ಷ ವೆಚ್ಚ ಹಾಗೂ 24,282 ಹೆಕ್ಟೇರ್ ಪ್ರದೇಶಕ್ಕೆ ನೀರಾವರಿ ಸೌಲಭ್ಯಕ್ಕಾಗಿ ಕ್ರಮ.

1995-96ನೇ ಸಾಲಿನಲ್ಲಿ ರೂ. 143 ಕೋಟಿ ನಬಾರ್ಡ್ ಸಾಲ ನೆರವನ್ನು ಪಡೆದಿದ್ದು 6 ಮಧ್ಯಮ ನೀರಾವರಿ ಯೋಜನೆ ಹಾಗೂ 88 ಸಣ್ಣ ನೀರಾವರಿ ಯೋಜನೆಗಳ ಪೂರ್ಣಗೊಳಿಸುವ ಕಾರ್ಯಕ್ರಮ. ಅಲ್ಲದೆ ರೂ. 122.50 ಕೋಟಿ ಕೇಂದ್ರ ಸಾಲದ ನೆರವನ್ನು ಕೃಷ್ಣಾ ಮೇಲ್ದಂಡೆ ಯೋಜನೆ ಘಟ್ಟ-1, ಹಂತ-3, ಮಲಪ್ರಭಾ ಮತ್ತು ಹಿರೇಹಳ್ಳ ಯೋಜನೆಗಳ ಪಡೆಯಲಾಗಿದೆ. ಈ ನೆರವಿನಿಂದ ಯೋಜನೆಯನ್ನು ತ್ವರಿತಗೊಳಿಸುವ ಕ್ರಮ.

ನ್ಯಾಷನಲ್ ಹೈಡ್ರಾಲಜಿ ಪ್ರಾಜೆಕ್ಟ್‌ಗೆ ವಿಶ್ವಬ್ಯಾಂಕಿನಿಂದ ರೂ. 32 ಕೋಟಿ ಸಹಾಯಧನ ಪಡೆದು ಮೇಲ್ಮೈ ಜಲ ಮತ್ತು ಅಂತರ್ ಜಲ ಯೋಜನೆಗಳಿಗೆ ಅನ್ವಯವಾಗುವಂತೆಸೂಕ್ತ ವಿನ್ಯಾಸಹಾಗೂ ಸೂಕ್ತ ಜಾಲವನ್ನು ಸ್ಥಾಪಿಸಿಹೈಡ್ರಾಲಾಜಿಕಲ್ ಮಾಹಿತಿಯನ್ನು ಸಂಗ್ರಹಿಸುವ ಉದ್ದೇಶ.

**ಕರ್ನಾಟಕ ವಾರ್ತೆ.**

# ಜಾನಪದ ಸ್ತ್ರೀಕೇಂದ್ರಿತ ಕತೆಗಳು :
## ಪರ್ಯಾಯ ವ್ಯವಸ್ಥೆಯತ್ತ ಒಂದು ಯತ್ನ

ಡಾ. ಬಿ.ಎನ್. ಸುಮಿತ್ರಾ ಬಾಯಿ

ಸ್ತ್ರೀಕತೆಗಳ ಮತ್ತೊಂದು ಮುಖ್ಯ ವಿಚಾರ ಶೀಲದ ಪಾವಿತ್ರ್ಯದ ಪರಿಕಲ್ಪನೆಯನ್ನು ಕುರಿತದ್ದು. ಸ್ತ್ರೀಕೇಂದ್ರಿತ ಕತೆಗಳು ಹೆಣ್ಣಿನ ಶೀಲ ಅಥವಾ ಪಾತಿವ್ರತ್ಯವನ್ನು ಕುರಿತಂತೆ ಶಿಷ್ಟ ಸಂಪ್ರದಾಯದ ಪರಿಕಲ್ಪನೆಗಳನ್ನು ವಿಡಂಬಿಸಲೂ ಬಲ್ಲವು ಎಂಬುದನ್ನು ಸರ್ಪರಾಜನನ್ನು ಪ್ರೇಮಿಯಾಗಿ ಪಡೆದ ಕಾಮಾಕ್ಷಿಯೆಂಬ ಗೃಹಿಣಿಯ ಕತೆ ಸಾಬೀತು ಮಾಡುತ್ತದೆ. ಈ ಕತೆಯ ಆರಂಭದಲ್ಲಿ ನಾಯಕಿ ಕಾಮಾಕ್ಷಿ ಗಂಡನಿಗೆ ಬೇಡವಾದವಳು. ದಾಂಪತ್ಯದ ಈ ವಿರಸದ ಜೊತೆ, ಅವನು ಸದಾ ವೇಶ್ಯೆಯೊಬ್ಬಳ ಬಳಿಯಲ್ಲೇ ಬದುಕುವುದನ್ನೂ ಈಕೆ ಹಣೆ ಬರಹವೆಂದು ಮೌನವಾಗಿ ಸಹಿಸಬೇಕಾದ ಸ್ಥಿತಿಯಿದೆ. ನೆರೆಯ ಮುದುಕಿಯೊಬ್ಬಳು ಇವಳ ಮೂಕ ಸಂಕಟ ನೋಡಲಾಗದೆ, ಗಂಡನಲ್ಲಿ ಈಕೆಯ ಬಗ್ಗೆ ಪ್ರೀತಿ ಹುಟ್ಟಿಸಲು ಕಷಾಯವೊಂದನ್ನು ನೀಡಿ, ಅವನ ಆಹಾರದಲ್ಲಿ ಅದನ್ನು ಬೆರೆಸಿಕೊಡು ಎಂದು ಸೂಚಿಸುತ್ತಾಳೆ. ಹತಾಶ ಸ್ಥಿತಿಯಲ್ಲಿ ಅದನ್ನು ಒಪ್ಪಿದ ಕಾಮಾಕ್ಷಿ ತಾನು ತಯಾರಿಸಿದ್ದ ಪಾಯಸಕ್ಕೆ ಆ ಔಷಧವನ್ನು ಹಾಕಿದರೆ, ಅದು ರಕ್ತದಂತೆ ಕೆಂಪಾಗುತ್ತದೆ. ಅವಳು ಹೆದರಿ, ಅದನ್ನು ಹಿತ್ತಲಿನಲ್ಲಿದ್ದ ಹುತ್ತದೊಳಗೆ ಸುರಿಯುತ್ತಾಳೆ. ಆ ಹುತ್ತದಲ್ಲಿ ಐದು ಹೆಡೆಯ ಕಾಳಿಂಗ ಸರ್ಪವೊಂದು ವಾಸವಾಗಿತ್ತು. ಈಕೆ ಸುರಿದ ಪಾಯಸವನ್ನು ಸರ್ಪವು ಹೀರಿಕೊಂಡದ್ದರಿಂದ ಆ ಸರ್ಪ ರಾಜನಿಗೆ ಇವಳ ಮೇಲೆ ಅತಿಯಾಗಿ ಪ್ರೀತಿ ಹುಟ್ಟುತ್ತದೆ. ಗಂಡ ಮನೆಯಲ್ಲಿ ಇಲ್ಲದಾಗ, ರಾತ್ರಿ ವೇಳೆಯಲ್ಲಿ ಸರ್ಪರಾಜ ಅವಳ ಗಂಡನಂತೆಯೇ ವೇಷತೊಟ್ಟು ಇವಳಲ್ಲಿಗೆ ಬರುತ್ತಾನೆ. ಗಂಡನೆಂದೇ ನಂಬಿ ಅವಳು ಅವನನ್ನು ಸೇರುತ್ತಾಳೆ. ಹೀಗೆ ಎಷ್ಟೋ ಕಾಲ ಸಂದು, ಅವಳು ಗರ್ಭಿಣಿಯಾಗುತ್ತಾಳೆ. ಇನ್ನು ಅವಳಿಂದ ವಿಷಯ ಮುಚ್ಚಿಡಬಯಸದೆ ಸರ್ಪರಾಜನು ತನ್ನ ನಿಜಸಂಗತಿಯನ್ನೆಲ್ಲ ತಿಳಿಸಿ, ತನ್ನ ನಿಜರೂಪವನ್ನೂ ತೋರಿಸುತ್ತಾನೆ. ಆಕೆ ಮುಂದೆ ಎದುರಿಸುವ ಪರಿಸ್ಥಿತಿಗಳಲ್ಲಿ ತಾನು ಎಲ್ಲ ರೀತಿಯಲ್ಲೂ ಸಹಾಯ ಮಾಡುತ್ತೇನೆಂದು ಮಾತುಕೊಟ್ಟು ಅದರಂತೆ ನಡೆಯುತ್ತಾನೆ. ಗಂಡನಿಂದ ದೂರವಿದ್ದವಳು ಗರ್ಭಿಣಿಯಾದ ಸಂಗತಿ, ಅವಳ ಗಂಡನ ಕೋಪ ಸಂಶಯಗಳಿಗೆ ಈಡಾಗಿ, ರಾಜ ಸಭೆಯಲ್ಲಿ ನ್ಯಾಯ ಕೇಳುವವರೆಗೂ ಬೆಳೆಯುತ್ತದೆ. ನಾಗರಾಜನ ಸಲಹೆಯಂತೆ ಕಾಮಾಕ್ಷಿ ತುಂಬಿದ ರಾಜಸಭೆಯಲ್ಲಿ ತನ್ನಲ್ಲಿರುವ ಕೂಸು ಗಂಡನದ್ದೇ ಹೊರತು ಬೇರಾರದೂ ಅಲ್ಲವೆಂದೂ ಇದನ್ನು ನಂಬದವರು ತನ್ನ ಸತ್ವ ಪರೀಕ್ಷಿಸಬಹುದೆಂದೂ ಹೇಳುತ್ತಾಳೆ. ಊರಾಚೆಯ ಶಿವಾಲಯದಲ್ಲಿ ನೆಲೆಸಿರುವ ಕಾಳಿಂಗ ಸರ್ಪಕ್ಕೆ ತಾನು ಕೈಯಿರಿಸುವುದಾಗಿಯೂ, ತನ್ನ ಮಾತು ಸುಳ್ಳಾಗಿದ್ದರೆ ಆ ಸರ್ಪ ತನ್ನನ್ನು ಕಚ್ಚಲೆಂದೂ ಆಕೆ ಘೋಷಿಸುತ್ತಾಳೆ. ಈ ಸತ್ವ ಪರೀಕ್ಷೆಯನ್ನು ಒಪ್ಪಿ ಎಲ್ಲರೂ ಶಿವಾಲಯದಲ್ಲಿ ನೆರೆದಿರುತ್ತಾರೆ. ಅವಳು ಮೊದಲೇ ಹೇಳಿದಂತೆ ತನ್ನ ಸತ್ಯದ ಬಗ್ಗೆ ಆಣೆಯಿಟ್ಟು ಅಲ್ಲಿದ್ದ ಕಾಳಿಂಗ ಸರ್ಪದತ್ತ ಕೈಚಾಚಿದಾಗ ಆ ನಾಗರಾಜ ಅವಳ ಕೊರಳಲ್ಲಿ ಹಾರದಂತೆ ಸುತ್ತಿಕೊಂಡು, ತನ್ನ ಐದೂ ಹೆಡೆ ಬಿಚ್ಚಿ ಮೆಲ್ಲಗೆ ತೂಗಾಡಿಸುತ್ತಾನೆ. ನೆರೆದ ಜನರೆಲ್ಲ ಈಕೆ ಎಂಥ ಮಹಾಪತಿವ್ರತೆಯೆಂದು ಕೊಂಡಾಡಿ ಕಾಲಿಗೆರಗುತ್ತಾರೆ. ಗಂಡನೂ ಬೇರೇನೂ ತೋರದೆ ಅವಳನ್ನು ಒಪ್ಪಿಕೊಳ್ಳಬೇಕಾಗುತ್ತದೆ. ಅವಳಿಗೆ ಹುಟ್ಟಿದ ಗಂಡುಮಗು ದೈವಿಕ ಕಳೆಯಿಂದ ಕೂಡಿದ್ದು ಆಕೆಯ ಗಂಡ, ದಿನವೂ ಹೆಚ್ಚು ಕಾಲ ಆ ಮಗುವಿನೊಂದಿಗೆ ಆಡುವುದರಲ್ಲಿ ಕಳೆಯತೊಡಗುತ್ತಾನೆ. ತನ್ನಲ್ಲಿಗೆ ಆತ ಬರುವುದು ದಿನವೂ ತಡವಾಗುತ್ತಿರುವುದರಿಂದ ಆತಂಕಗೊಂಡ ವೇಶ್ಯೆ, ಸೇವಕಿ ಮೂಲಕ ನಿಜವನ್ನು ಶೋಧಿಸಿ, ತಿಳಿದು, ಅವನ ಮಗುವನ್ನು ತಾನೂ ಕಾಣಲು ಬಯಸಿರುವೆನೆಂದು ಕಾಮಾಕ್ಷಿಗೆ ಹೇಳಿಕಳಿಸಿ, ಮಗುವನ್ನು ಕಳಿಸಿಕೊಡುವಂತೆ ಬೇಡಿಕೊಳ್ಳುತ್ತಾಳೆ. ಆಗ ನಾಗರಾಜನ ಸಲಹೆಯಂತೆ ಕಾಮಾಕ್ಷಿ ಒಂದು ಷರತ್ತು ವಿಧಿಸುತ್ತಾಳೆ. ತಾನು ಮಗುವನ್ನು ಕಳಿಸುವ ಮೊದಲು, ಮತ್ತು ವಾಪಸ್ಸು ಪಡೆದ ಬಳಿಕ ಅವನನ್ನು ಒಡವೆ ಸಮೇತ ತೂಕಮಾಡಿ, ತೂಕದಲ್ಲಿ ಕಡಿಮೆಯಾದರೆ, ಒಡವೆ ಕದ್ದ ತಪ್ಪಿಗಾಗಿ ಆ ವೇಶ್ಯೆ ತನ್ನ ಮನೆಗೆ ನೀರು ಹೊರುವ ದಾಸಿಯಾಗಬೇಕು ಎಂಬುದು ಆ ಷರತ್ತು. ಒಡವೆ ತಾನೆ ಯಾರಿಗೆ ಬೇಕು ಎಂದು ಆ ವೇಶ್ಯೆ ಈ ಷರತ್ತಿಗೆ ಒಪ್ಪಿ ಮಗುವನ್ನು ಕರೆಸಿಕೊಳ್ಳುತ್ತಾಳೆ. ಆದರೆ ನಾಗರಾಜನ ಉಪಾಯದಿಂದಾಗಿ, ಆಕೆ ಮಗುವನ್ನು ಹಿಂದಿರುಗಿಸಿದಾಗ ಕೆಲವು ಒಡವೆಗಳು ಕಾಣೆಯಾಗಿ, ತೂಕ ಕಡಿಮೆಬಂದು ಒಪ್ಪಂದದ ಪ್ರಕಾರ ವೇಶ್ಯೆ ಕಾಮಾಕ್ಷಿಗೆ ದಾಸಿಯಾಗಬೇಕಾಗುತ್ತದೆ. ಹೀಗೆ ಸರ್ಪರಾಜನೇ

* Towards a counter system: Women's Tales: A.K. Ramanujan : Gender, Genre and Power in South Asian Expressive Traditions: Ed. Arjun Appadurai, Frank J. Koram & Margaret A Mills. Delhi 1994

ಗಂಡಹೆಂಡತಿಯರನ್ನು ಒಂದುಗೂಡಿಸುತ್ತಾನೆ. ಕಾಮಾಕ್ಷಿ ಈಗ ಗಂಡ, ಮಗನ ನಡುವೆ ತೀರಾ ಸಂತೃಪ್ತಳು. ಆದರೆ ಅದನ್ನು ಕಂಡು ನಾಗರಾಜನಿಗೆ ಅಸೂಯೆಹುಟ್ಟಿ, ಅವನು ಮಂಚದಿಂದ ಇಳಿಬಿದ್ದಿದ್ದ ಆಕೆಯ ಕೂದಲ ರಾಶಿಗೆ ತನ್ನನ್ನು ಬಿಗಿದುಕೊಂಡು ಸಾವನ್ನಪ್ಪುತ್ತಾನೆ. ಬೆಳಿಗ್ಗೆ ನಿಜತಿಳಿದ ಕಾಮಾಕ್ಷಿ ಬಹುವಾಗಿ ದುಃಖಿಸುತ್ತಾಳೆ. ಸರ್ಪಸತ್ತರೆ ಹೀಗೇಕೆ ದುಃಖಿಸುತ್ತೀ ಎಂದು ಗಂಡ ಕೇಳಿದಾಗ, ಆ ಸರ್ಪ ದೈವಿಕ ರೂಪದ್ದೆಂದೂ, ಅದನ್ನು ಪೂಜಿಸಿದ್ದರಿಂದಲೇ ಗಂಡ ಪುನಃ ತನಗೆ ದೊರೆತನೆಂದೂ, ತನ್ನ ಕೂಸಿಗೆ ತಂದೆ ಸಮಾನನಾಗಿದ್ದ ಆ ಸರ್ಪರಾಜನಿಗೆ ಯೋಗ್ಯರೀತಿಯ ದಹನ ಸಂಸ್ಕಾರಗಳು ತಮ್ಮ ಮಗನ ಕೈಯಿಂದ ನಡೆಸಬೇಕಾದದ್ದು ತಮಗೆ ಧರ್ಮವೆಂದೂ ಆಕೆ ಹೇಳುತ್ತಾಳೆ. ಅದರಂತೆ ನಡೆಸಿಯೂ ನಡೆಸಿ, ತನ್ನ ಋಣ ತೀರಿತೆಂದು ಸಂತೋಷದಿಂದ ಬದುಕುತ್ತಾಳೆ.

ಈ ಕತೆಯಲ್ಲಿ ಗಂಡನಿಂದ ದೊರೆಯದಿದ್ದ ಸುಖ, ಸಂತಾನಗಳನ್ನೆಲ್ಲ ನಾಯಕಿಗೆ ನೀಡುವಾತ ಅವಳ ಪ್ರೇಮಿ. ಗಂಡ-ಹೆಂಡತಿ ಒಂದಾಗಲೂ ಅವನೇ ನೆರವಾಗುತ್ತಾನೆ. ವಿವಾಹದ ಚೌಕಟ್ಟಿನೊಳಗೆ ಹೆಣ್ಣು ನಿರೀಕ್ಷಿಸಬಹುದಾದ ಗಂಡ, ಮಗು, ಸುಖಸಂಸಾರ, ಸವತಿಯ ಕಾಟವಿಲ್ಲದ ಸ್ಥಿತಿ, ಸಮಾಜದ ಮೂಲಕ ಗೃಹಿಣಿಗೆ ದೊರಕುವ ಗೌರವ ಎಲ್ಲವೂ ಸರ್ಪರಾಜನ ಮೂಲಕ ಕಾಮಾಕ್ಷಿಗೆ ಲಭಿಸುತ್ತವೆ. ತನ್ನ ಮಗನ ನಿಜವಾದ ತಂದೆಯಾಗಿದ್ದ ಆತನ ಅಂತ್ಯಸಂಸ್ಕಾರವನ್ನು ಮಗನಿಂದಲೇ ಮಾಡಿಸಿ ಆಕೆ ಧನ್ಯಳೂ ಆಗುತ್ತಾಳೆ. ಈ ಕತೆಯು ಶಿಷ್ಟ ಪರಂಪರೆಯ ಶೀಲ, ಪತಿನಿಷ್ಠೆಗಳನ್ನು ಹೇಗೆ ವಿಡಂಬಿಸುತ್ತದೆ ಎಂಬುದನ್ನು ಗಮನಿಸಬೇಕು. ರಾಮಾಯಣದ ಸೀತೆ ಸತ್ವಪರೀಕ್ಷೆಯಲ್ಲಿ ಗೆಲ್ಲುವುದು ನಿಜವಾಗಿ ಪತಿವ್ರತೆಯೇ ಆಗಿದ್ದುದರಿಂದಾಗಿ. ಆದರೆ ಕಾಮಾಕ್ಷಿ ತಾನೇ ಹೂಡಿದ ಸತ್ವಪರೀಕ್ಷೆಯಲ್ಲಿ ತಾನು ಮುಟ್ಟಿದ ಸರ್ಪ ತನ್ನ ಪ್ರೇಮಿಯೇ ಆಗಿದ್ದುದರಿಂದಾಗಿ ಗೆಲ್ಲುತ್ತಾಳೆ. ಅಂದರೆ ಪತಿನಿಷ್ಠೆಯಿಲ್ಲದಿರುವುದರ ಮೂಲಕವಾಗಿಯೇ ಈಕೆ ಮಹಾಪತಿವ್ರತೆಯೆಂದು ಗೌರವಿಸಲ್ಪಡುತ್ತಾಳೆ. ಅಷ್ಟೇ ಅಲ್ಲ, ಗಂಡನಿಂದ ನಿರ್ಲಕ್ಷ್ಯಕ್ಕೊಳಗಾಗಿದ್ದವಳನ್ನು ಮತ್ತೆ ಗಂಡನನ್ನು ಸೇರುವಂತೆ ಮಾಡಲು ಒಬ್ಬ ಪ್ರೇಮಿಯೇ ಬೇಕಾಯಿತು ಎಂಬುದರಿಂದ ಕೇಳುಗರಲ್ಲಿ ಈಕೆಯ ಬಗ್ಗೆ ಅನುಕಂಪವನ್ನೇ ಕತೆ ಹುಟ್ಟಿಸುತ್ತದೆ. ಒಂದೊಂದಾಗಿ ಬಯಸಿದ್ದನ್ನೆಲ್ಲ ಗೆದ್ದುಕೊಳ್ಳುತ್ತ ಸಾಗುವ ಇವಳ ವಿಜಯದಲ್ಲಿ ಕೇಳುಗರೂ ಸಂತೋಷ ಅನುಭವಿಸುತ್ತಾರೆ. ಈ ಜಾನಪದ ಕತೆಯ ದೃಷ್ಟಿ ಮೂಲಭೂತವಾಗಿ ಸುಖಾನುಭವದ ಪರವಾಗಿರುವಂಥದು. ಮನುಷ್ಯನು ಸುಖಪಡಬೇಕು ಎಂಬ ಜೀವನಪರವಾದ ವಿಚಾರ ಇಲ್ಲಿದೆ. ಶಿಷ್ಟ ಪರಂಪರೆಯ ಅಹಲ್ಯೆಯ ಕತೆಯೇ ಇಲ್ಲಿ ಭಿನ್ನರೀತಿಯಿಂದ ಬಿತ್ತರಗೊಳ್ಳುತ್ತದೆಂಬುದನ್ನು ಗಮನಿಸಬೇಕು. ಅಹಲ್ಯೆಯ ಕತೆಯಲ್ಲಿ ಸುಖಾಪೇಕ್ಷೆಯು ಶಿಕ್ಷೆಗೊಳಗಾಗಿ, ವಿರಕ್ತಿಧರ್ಮವು ಪುರಸ್ಕೃತವಾಗುತ್ತದೆ. ಆ ರೀತಿ ನೈತಿಕ ಪ್ರಜ್ಞೆಯನ್ನು ಹೇರುವ ಸೂಪರ್ ಇಗೋವನ್ನೇ ಈ ಕಾಮಾಕ್ಷಿಯ ಕತೆ, ಶಿಕ್ಷಿಸುವಂತೆ ತೋರುತ್ತದೆ.

ಈ ಕತೆಯಲ್ಲಿ ಇನ್ನೂ ಕೆಲವು ಅಂಶಗಳಿವೆ. ಇಲ್ಲಿ ಪುರುಷಪಾತ್ರ ಹಗಲಿನಲ್ಲಿ ಉದಾಸೀನನಾಗಿ, ನಿಷ್ಠುರವಾಗಿರುವ ಗಂಡನಾದರೆ, ರಾತ್ರಿಯಲ್ಲಿ ಉತ್ಕಟ ಪ್ರೇಮಿಯಾಗುತ್ತಾನೆ. ಸಾಂಪ್ರದಾಯಿಕ ಒಟ್ಟು ಕುಟುಂಬದ ಪರಿಸರದಲ್ಲಿ ಗಂಡನೊಬ್ಬ ತನ್ನ ಹೆಂಡತಿಯಲ್ಲಿ ಹಾಡೆಹಗಲಿನಲ್ಲಿ, ಎಲ್ಲರ ಎದುರಲ್ಲಿ ಬಹಿರಂಗವಾಗಿ ಒಲುಮೆ ತೋರುವುದೂ ನಿಷಿದ್ಧವಾಗಿರುತ್ತದೆ. ಸಹಜವಾಗಿಯೇ ಅವನ ಪ್ರೇಮ, ಉತ್ಕಟತೆಗಳೆಲ್ಲ ರಾತ್ರಿಯಲ್ಲಿ, ಕತ್ತಲಿನ ಏಕಾಂತದಲ್ಲೇ ಪ್ರಕಟಗೊಳ್ಳಲು ಸಾಧ್ಯ. ಕಾಮಾಕ್ಷಿಯ ನೆಲೆಯಿಂದ, ಪ್ರೇಮಿಕೂಡ ಗಂಡನ ರೂಪದಲ್ಲೇ ಕಾಣಿಸಿಕೊಳ್ಳುವ ತಂತ್ರ, ಅವಳಲ್ಲಿ ಅಪರಾಧಿ ಭಾವವನ್ನು ಇಲ್ಲವಾಗಿಸುವಲ್ಲಿಯೂ ನೆರವಾಗುವುದು, ಅವಳ ಮಟ್ಟಿಗೆ, ನಿಜ ತಿಳಿಯುವವರೆಗೆ ಇಬ್ಬರೂ ಒಂದೇ ಆಗಿರುವುದೂ ಗಮನಾರ್ಹ. ಪ್ರೇಮಿಯ ಸಾವುಕೂಡ ಅವಳಿಗೇ ಅನುಕೂಲಕರವಾಗಿದೆ. ಈ ರೀತಿ ಸ್ತ್ರೀಕೇಂದ್ರಿತ ಕತೆಗಳಲ್ಲಿ ಹಾವು ಸೌಮ್ಯರೂಪದ ಪುರುಷಪ್ರತೀಕವಾಗುತ್ತದೆ. ಪ್ರೀತಿಯ ಸೋದರನಾಗಿ, ನೆರವು ನೀಡುವ ಗೆಳೆಯನಾಗಿ, ಭದ್ರತೆ ನೀಡುವ ತಂದೆಯ ಪ್ರತೀಕವಾಗಿಯೂ ಅದು ಕಾಣಿಸುತ್ತದೆ. ಪುರುಷಕೇಂದ್ರಿತ ಕತೆಗಳಲ್ಲಿ ಹಾವಿನ ಪ್ರತೀಕ ಇದಕ್ಕೆ ವಿರುದ್ಧವಾದದ್ದು. ಅದು ನಾಯಕನ ಶತ್ರು, ಪ್ರತಿಸ್ಪರ್ಧಿಯಾದ ಪುರುಷ ಪ್ರತೀಕ, ಅವನಿಂದ ಕೊಲ್ಲಲ್ಪಡುವ ಅಥವಾ ಅವನನ್ನು ಕೊಲ್ಲುವ ಶಕ್ತಿ. ರಾಜಕುಮಾರಿಯೊಬ್ಬಳ ಮೂಗಿನಿಂದ ಹೊರಬರುತ್ತಿದ್ದ ಸರ್ಪವೊಂದು, ಅವಳ ಕೈಹಿಡಿದ ರಾಜಪುತ್ರರನ್ನು ಮೊದಲ ರಾತ್ರಿಯೇ ಕೊಲ್ಲುತ್ತಿದ್ದು, ಕೊನೆಗೆ ಬುದ್ಧಿವಂತನಾದ ನಾಯಕ, ರಾತ್ರಿಯಿಡೀ ಎಚ್ಚರವಿದ್ದು ಆ ಸರ್ಪವನ್ನು ಕೊಂದು ಬದುಕಿ ಉಳಿದಿದ್ದಕ್ಕಾಗಿ ಅರ್ಧರಾಜ್ಯವನ್ನು ಮಾವನಿಂದ ಪಡೆಯುವ ಕಥೆ ಇಂಥ ಪುರುಷ ಕೇಂದ್ರಿತ ಕತೆಗೆ ಉದಾಹರಣೆಯಾಗಿದೆ.

ಸ್ತ್ರೀಕೇಂದ್ರಿತ ಕತೆಗಳ ಹಾವಿನ ಸಂಕೇತ ಹೀಗೆ ಪುರುಷ ಕೇಂದ್ರಿತ ಕತೆಗಳದ್ದಕ್ಕಿಂತ ಭಿನ್ನವಾಗಿರಲು ಸಾಧ್ಯ. ಅಷ್ಟೇ ಅಲ್ಲ ಈ ಕತೆಗಳ ರಚನಾ ವಿನ್ಯಾಸ, ಕ್ರಿಯಾವಾಹಿನಿ, ಗುರಿಗಳೂ ಭಿನ್ನವಾಗಿರುತ್ತವೆ. ಪಚ್ಚೆ ಮರದಲ್ಲಿರುವ ಚಿನ್ನದ ಗಿಣಿ ಹುಡುಕುತ್ತಾ ಹೋಗುವ ರಾಜಕುಮಾರ, ತಾನು ಪಟ್ಟ ಕಷ್ಟ, ಮಾಡಿದ ಸಾಹಸಗಳಿಗೆ ಬಹುಮಾನದ ರೀತಿಯಲ್ಲಿ ತಾನೊಬ್ಬ ರಾಜಕುಮಾರಿಯೊಂದಿಗೆ ಮದುವೆಯಾಗುತ್ತಾನೆ. ಆದರೆ ಸ್ತ್ರೀಕೇಂದ್ರಿತ ಕತೆಯಲ್ಲಿ ನಾಯಕಿ ಮೊದಲಲ್ಲೇ ಗಂಡನಾಗುವವನನ್ನು ಸಂಧಿಸುತ್ತಾಳೆ. ಅಥವಾ ಮೊದಲ ಭಾಗದಲ್ಲೇ ಅವಳ

ಮದುವೆಯಾಗುತ್ತದೆ. ನಂತರ ಅಗಲಿಕೆ, ನಂತರ ಎಷ್ಟೋ ಬಗೆಯ ಪಾಡುಪಟ್ಟು ಕೊನೆಗೆ ಅವಳು ಪಡೆಯುವುದು ಅದೇ ಗಂಡನನ್ನು. ನೂರಾರು ಬಗೆಯ ಯಾತನೆ ಅನುಭವಿಸುವುದು, ಸಮಾಜ ಗೃಹಿಣಿಗೆ ಕೊಡುವಂಥ ಗೌರವವನ್ನು ಗಳಿಸುವುದಕ್ಕಾಗಿ. (ಈ ಕಥಾಸರಣಿಯಲ್ಲಿ ಶಿಷ್ಟ ಸಂಪ್ರದಾಯದ ಶಕುಂತಲೆ ದೊಡ್ಡ ಮಾದರಿಯಾಗಿರಬಹುದು.)

ಕನ್ನಡದ ಸ್ತ್ರೀಜಾನಪದ ಕತೆಗಳು ಯೂರೋಪಿನ ಸಿಂಡ್ರೆಲ್ಲಾ, ಅಥವಾ ಸ್ನೋವೈಟ್ ಕತೆಗಳಂತೆ ನಾಯಕಿಯ ಬವಣೆಗಳೆಲ್ಲ ಮದುವೆಯೊಂದಿಗೆ ಮುಗಿದು ಸುಖಾಂತವಾಗುವ ರೀತಿಯಲ್ಲೂ ಇರುವುದಿಲ್ಲ. ಮೊದಲಲ್ಲೇ ಒಂದು ಮಿಲನ, ವೈವಾಹಿಕ ಬಂಧನ, ನಂತರ ದೀರ್ಘ ಅಗಲಿಕೆ, ಕೊನೆಗೆ ಮತ್ತೆ ಮಿಲನ ಮತ್ತು ಮತ್ತಷ್ಟು ಬಲವಾದ ದಾಂಪತ್ಯ ಬಂಧನ ಇವುಗಳ ಗತಿಯನ್ನು ನಿಯಂತ್ರಿಸುವ ಅಂಶಗಳು. ಕೆಲವು ಸಲ ಕತೆಯ ನಡುವಿನಲ್ಲೇ ಗಂಡನ ಸಾವು, ಕ್ರೂರವಾದ ಕಷ್ಟಗಳು ಎದುರಾಗಿ, ಕೊನೆಗೆ ನಾಯಕಿಯೇ ಅವನನ್ನು ಬದುಕಿಸಿಕೊಳ್ಳುವುದೂ ಉಂಟು. (ಶಿಷ್ಟ ಪರಂಪರೆಯ ಸಾವಿತ್ರಿಯ ಹಾಗೆ) ಇನ್ನು ಕೆಲವು ಸಲ ಕೆಳಜಾತಿಯ ದೊಂಬರಂಥ ಹೆಣ್ಣು, ಇವಳ ಗಂಡನನ್ನು ವಶೀಕರಿಸಿಕೊಂಡು ಇವಳ ಸ್ಥಾನವನ್ನು ಆಕ್ರಮಿಸಬಹುದು. ಇದು ಮೇಲುವರ್ಗದ ಹೆಣ್ಣಿನಲ್ಲಿ ಕೆಳವರ್ಗದ ಹೆಣ್ಣನ್ನು ಕುರಿತಂತೆ ಇರಬಹುದಾದ ಬಲಿಷ್ಟ ಪ್ರತಿಸ್ಪರ್ಧಿಯ ಹೆದರಿಕೆಯ ಸೂಚಕವೂ ಆಗಿದ್ದೀತು.

ಈ ರೀತಿ ಸ್ತ್ರೀಕೇಂದ್ರಿತ ಕತೆಗಳು ಶಿಷ್ಟ ಪರಂಪರೆಗೇ ಭಿನ್ನವಾದ ಚಿಂತನೆ ಹಾಗೂ ಪರಿಹಾರಗಳನ್ನೂ ಒಳಗೊಂಡಿದ್ದು ವಾಸ್ತವ ಜೀವನದಲ್ಲಿ ಹೆಣ್ಣುಗಳು ನಿಭಾಯಿಸಲು ಸಾಧ್ಯವಿಲ್ಲದಂಥ ಅಥವಾ ಕೌಟುಂಬಿಕ ನಿಷ್ಠುರ ನಿರ್ಬಂಧಗಳೆದುರಲ್ಲಿ ಪಡೆಯುವುದೂ ಸಾಧ್ಯವಿಲ್ಲದಂಥ ಪರಿಹಾರಗಳನ್ನು ಕಾಲ್ಪನಿಕ ನೆಲೆಯಲ್ಲಿ ಸೃಷ್ಟಿಸಿಕೊಳ್ಳುವುದು ಗಮನಾರ್ಹ. ಅಂದರೆ ತಮ್ಮ ನಿಜವಾದ ನೀರಸವಾದ, ಬದುಕಿನ ಕ್ರೂರ ಅಂಶಗಳೊಂದಿಗೆ ಹೊಂದಾಣಿಕೆ ಮಾಡಿಕೊಳ್ಳುವುದಕ್ಕೂ ಈ ಕತೆಗಳ ಕಾಲ್ಪನಿಕ ನೆಲೆಗಳು ಅವರಿಗೆ ನೆರವಾಗಬಹುದು. ರಾಮಾನುಜನ್ ಅವರು ಈ ಸ್ತ್ರೀಕೇಂದ್ರಿತ ಕತೆಗಳಲ್ಲಿ ಪರ್ಯಾಯ ವ್ಯವಸ್ಥೆಯನ್ನು ಕಟ್ಟುವ ಯತ್ನವಿದ್ದರೂ, ಇದನ್ನು ದಬ್ಬಾಳಿಕೆಯ ವ್ಯವಸ್ಥೆಯ ವಿರುದ್ಧವಾದ ಪ್ರತಿಭಟನೆಯಾಗಿ ಗುರುತಿಸುವುದಕ್ಕಿಂತ ಹೆಚ್ಚಾಗಿ ಇದು ಒಂದೇ ಸಂಸ್ಕೃತಿಯ ವಿವಿಧ ಸಂದರ್ಭಗಳಲ್ಲಿ ಒಟ್ಟೊಟ್ಟಿಗೇ ಅಸ್ತಿತ್ವದಲ್ಲಿರಬಹುದಾದ ಪರಸ್ಪರ ಭಿನ್ನರೂಪವುಳ್ಳ ಅಭಿವ್ಯಕ್ತಿಗಳೆಂದು ನೋಡಲು ಬಯಸುತ್ತಾರೆ. ಅಂದರೆ ಇಂಥ ಅಧ್ಯಯನಗಳು, ಪರ್ಯಾಯ ವ್ಯವಸ್ಥೆಯತ್ತ ಸಾಧನಗಳೆಂದು ನೋಡುವುದಕ್ಕಿಂತ ಸಾಂಸ್ಕೃತಿಕ ವ್ಯವಸ್ಥೆಯೊಂದರ ಸಂಕೀರ್ಣ ವಾಸ್ತವ ಸ್ವರೂಪವನ್ನು ಅರ್ಥಮಾಡಿಕೊಳ್ಳಲು ನೆರವಾಗುವ ಅಂಶಗಳೆನ್ನುವುದು ಅವರ ವಿಚಾರವೆಂದು ತೋರುತ್ತದೆ. □

---

ಪ್ರಥಮ ಲೋಕಸಭೆಯ ಅವಧಿಯಲ್ಲಿ (1952-57) ಒಟ್ಟು 499 ಸ್ಥಾನಗಳ ಪೈಕಿ ಮಹಿಳೆಯರ ಸಂಖ್ಯೆ ಕೇವಲ 22. ಎರಡನೇ ಲೋಕಸಭೆಯಲ್ಲಿ (1957-62)ರಲ್ಲಿ ಒಟ್ಟು 500 ಮಂದಿಯಲ್ಲಿ 27 ಮಂದಿ ಮಹಿಳೆಯರು; ಮೂರನೇ ಲೋಕಸಭೆ (1962-67) ಒಟ್ಟು 503ರಲ್ಲಿ ಮಹಿಳೆಯರ ಸಂಖ್ಯೆ 34; ನಾಲ್ಕನೇ ಲೋಕಸಭೆ (1967-71)ರಲ್ಲಿ ಒಟ್ಟು 521ರ ಪೈಕಿ ಮಹಿಳೆಯರು 31, ಐದನೇ ಲೋಕಸಭೆ (1971-76)ಯಲ್ಲಿ ಒಟ್ಟು 521ರಲ್ಲಿ ಮಹಿಳೆಯರ ಸಂಖ್ಯೆ 22; ಆರನೇ ಲೋಕಸಭೆ (1979-80)ರಲ್ಲಿ ಒಟ್ಟು 544 ಸದಸ್ಯರ ಪೈಕಿ ಮಹಿಳೆಯರ ಸಂಖ್ಯೆ 19; ಏಳನೇ ಲೋಕಸಭೆ (1980-84)ಯಲ್ಲಿ ಒಟ್ಟು 544 ಸದಸ್ಯರ ಪೈಕಿ ಮಹಿಳೆಯರ ಸಂಖ್ಯೆ 28; ಎಂಟನೇ ಲೋಕಸಭೆ (1985-90)ರಲ್ಲಿ ಒಟ್ಟು 544 ಸದಸ್ಯರ ಪೈಕಿ ಮಹಿಳೆಯರು 44; ಒಂಭತ್ತನೇ ಲೋಕಸಭೆ (1990-91)ರಲ್ಲಿ ಒಟ್ಟು 529ರಲ್ಲಿ ಮಹಿಳೆಯರು 28; ಹತ್ತನೇ ಲೋಕಸಭೆ (1991-96)ರಲ್ಲಿ ಒಟ್ಟು 509ರಲ್ಲಿ ಮಹಿಳೆಯರ ಸಂಖ್ಯೆ 39 ಮತ್ತು ಹನ್ನೊಂದನೇ ಲೋಕಸಭೆಯಲ್ಲಿ (1996)ರಲ್ಲಿ ಒಟ್ಟು 544 ಸದಸ್ಯರ ಪೈಕಿ ಮಹಿಳೆಯರು 36 ಮಂದಿ ಆಯ್ಕೆಯಾಗಿದ್ದಾರೆ.

# ಒಟ್ಟು ಸಮಾಜವನ್ನು ಬಿಡುಗಡೆಗೊಳಿಸುವುದಕ್ಕಾಗಿ ಸ್ತ್ರೀ ಬಿಡುಗಡೆಗೊಳ್ಳಬೇಕು.

- ಎಚ್. ಎಸ್. ಪಾರ್ವತಿ

ಕರ್ನಾಟಕ ಲೇಖಕಿಯರ ಸಂಘ ಲೇಖಕಿಯರ ನಾಲ್ಕನೆಯ ಸಮ್ಮೇಳನವನ್ನು ನಾಡಿನ ಸುಸಂಸ್ಕೃತ ನಗರಗಳಲ್ಲೊಂದಾದ ಮಂಗಳೂರಿನಲ್ಲಿ ನಡೆಸುತ್ತಿರುವುದು ನಮಗೆಲ್ಲಾ ಸಂತೋಷದ ಹಾಗೂ ಹೆಮ್ಮೆಯ ವಿಚಾರ. ಸಾಹಿತ್ಯಕ್ಕೆ ಗಂಡು, ಹೆಣ್ಣೆಂಬ ಭೇದವಿಲ್ಲ, ಆದ್ದರಿಂದ ಲೇಖಕಿಯರಿಗೆಂದೇ ಪ್ರತ್ಯೇಕ ಸಂಘ, ಸಮ್ಮೇಳನ, ಪ್ರಶಸ್ತಿಗಳ ಅವಶ್ಯಕತೆ ಏನಿದೆ ಎನ್ನುವ ವಾದ ಹಳೆಯದು. ಲೇಖಕಿಯರ ಸಂಘ ಸ್ಥಾಪನೆಯಾದಾಗ ಸ್ವತಃ ಅನೇಕ ಜನ ಲೇಖಕಿಯರಿಂದಲೇ ಇಂತಹ ಮಾತು ಬಂದಿದ್ದುಂಟು. ಆದರೆ ಯಾವ ಸಮಾಜದಲ್ಲಿ ಗಂಡಿಗೆ ದೊರೆಯುವ ಆದರ, ಸನ್ಮಾನ, ವ್ಯಕ್ತಿತ್ವ ವಿಕಾಸಕ್ಕೆ ಬೇಕಾದ ಅವಕಾಶಗಳು ಇಂದಿಗೂ ಹೆಣ್ಣಿಗೆ ದುರ್ಲಭವಾಗಿದೆಯೋ ಅಂತಹ ಪುರುಷ ಪ್ರಧಾನ ಸಮಾಜದಲ್ಲಿ ಮಹಿಳೆ ತನ್ನ ಅಸ್ತಿತ್ವವನ್ನು ಸ್ಥಾಪಿಸುವುದಕ್ಕಾಗಿ ಪ್ರತ್ಯೇಕವಾದ ಸಂಘಟನೆಗಳನ್ನು ಮಾಡಿಕೊಳ್ಳಲೇಬೇಕಾದ ಅನಿವಾರ್ಯತೆ ಇದೆ.

ಕೆಲವು ತಿಂಗಳುಗಳ ಹಿಂದೆ ನಡೆದ ನಮ್ಮ ಸಂಘದ್ದೇ ಒಂದು ಕಾರ್ಯಕ್ರಮದಲ್ಲಿ ನಾಟಕ ಅಕಾಡೆಮಿ ಅಧ್ಯಕ್ಷರಾದ ಡಾ|| ಕೆ. ಮರುಳ ಸಿದ್ದಪ್ಪನವರು ಒಂದು ಮಾತು ಹೇಳಿದರು: "ನಮ್ಮ ದೇಶದಲ್ಲಿ ಜೀತಪದ್ಧತಿ ರದ್ದಾಗಿದೆ. ಆದರೆ ಹೆಣ್ಣು ಮಾತ್ರ ಈಗಲೂ ಜೀತದಾಳಾಗೇ ಮುಂದುವರಿದಿದ್ದಾಳೆ. ಒಬ್ಬ ಮನುಷ್ಯ ಒಂದು ಸಲ ಹೆಣ್ಣನ್ನು ಮದುವೆಯಾಗಿ ಬಿಟ್ಟರೆ ಆಯಿತು. ಅವಳು ಕೊನೆಯವರೆಗೂ ಅವನ ಇಚ್ಛೆಗೆ ಅನುಸಾರವಾಗಿಯೇ ಬದುಕಿರಬೇಕು" ಎಂದು. ಇಂತಹ ಮಾತುಗಳನ್ನು ಯಾರಾದರೂ ಹೇಳಿದ ತಕ್ಷಣ ಮಹಿಳೆಯರೂ ಸೇರಿದಂತೆ ಅನೇಕ ಜನರ ಹುಬ್ಬುಗಳು ಗಂಟಿಡುತ್ತವೆ. ತುಂಬಾ ಬುದ್ಧಿವಂತರು ಎನ್ನಿಸಿಕೊಂಡವರು, ಸಮಾಜದ ವಿವಿಧ ರಂಗದ ಮುಂಚೂಣಿಯಲ್ಲಿರುವವರು ಕೂಡಾ ಇಂಥ ಮಾತುಗಳಿಗೆಲ್ಲಾ ಪಾಶ್ಚಾತ್ಯ ಪ್ರಭಾವವೇ ಕಾರಣ ಎಂದು ಮೂಗು ಮುರಿಯುತ್ತಾರೆ. "ನಮ್ಮಲ್ಲಿ ಎಂಥೆಂಥ ಮಹಿಳೆಯರಿದ್ದರು, ಋಕ್ಕುಗಳನ್ನು ರಚಿಸಿದವರು, ಯುದ್ಧದಲ್ಲಿ ಹೋರಾಡಿದವರು ರಾಜ್ಯಭಾರ ಮಾಡಿದವರು ಎಲ್ಲರ ಕಥೆ ಪುರಾಣ, ಇತಿಹಾಸಗಳಲ್ಲಿ ದೊರೆಯುತ್ತವೆ. ಇಲ್ಲಿ ಸಾಮಾನ್ಯ ಸ್ತ್ರೀಯರಿಗೂ ಎಂತಹ ಗೌರವವಿತ್ತು, ಸ್ತ್ರೀಯರನ್ನು ಪೂಜಿಸಿದ ಕಡೆ ದೇವತೆಗಳೇ ನೆಲಸುತ್ತಾರೆ ಎನ್ನುವ ನಂಬಿಕೆ ಇತ್ತು. ತಾಯಿಯನ್ನು ಗೌರವಿಸುವುದಂತೂ ನಮ್ಮ ಸಂಪ್ರದಾಯದ ರಕ್ತದಲ್ಲೇ ಸೇರಿ ಹೋಗಿದೆ. ಆಧುನಿಕ ಯುಗದಲ್ಲಂತೂ ಎಷ್ಟೊಂದು ಕಾನೂನುಗಳು ಅವಳ ಪರವಾಗಿವೆ. ಎಲ್ಲ ರಂಗಗಳಲ್ಲೂ ಅವಳಿಗೆ ಅವಕಾಶವಿದೆ" ಎಂದೆಲ್ಲ ವಾದಿಸುತ್ತಾರೆ.

ನಮ್ಮ ಯುವ ಜನಾಂಗದ ದೃಷ್ಟಿಯಲ್ಲಂತೂ ಮಹಿಳೆ ತನಗೆ ಪ್ರತಿಸ್ಪರ್ಧಿ, ತನಗೆ ದೊರಕಬೇಕಾದ ಉದ್ಯೋಗ, ಸುಖ ಸೌಲಭ್ಯಗಳಿಗೆ ಧಕ್ಕೆ ತರುವವಳು ಎನ್ನುವ ಭಾವನೆಯಿದೆ. ಆದರೆ ನನ್ನದೊಂದೇ ಪ್ರಶ್ನೆ: ಇವರಿಗೆಲ್ಲ ತಮ್ಮ ಸುತ್ತಮುತ್ತಲ ಸಮಾಜದಲ್ಲಿ ಹೆಂಗಸರು ಪಡುತ್ತಿರುವ ಬವಣೆಯ ಬಗ್ಗೆ, ಸಹಿಸುತ್ತಿರುವ ಅಪಮಾನದ ಬಗ್ಗೆ ತಿಳುವಳಿಕೆಯೇ ಇಲ್ಲವೇ? ದಿನಂ ಪ್ರತಿ ಪತ್ರಿಕೆಗಳಲ್ಲಿ ಪ್ರಕಟವಾಗುವ ಸ್ತ್ರೀಯರ ಕೊಲೆ, ಆತ್ಮಹತ್ಯೆ, ಅತ್ಯಾಚಾರಗಳ ಬಗ್ಗೆ ಅರಿವೇ ಇಲ್ಲವೇ? ಅಥವಾ ಇಂಥ ವಿಚಾರಗಳ ಬಗ್ಗೆ ತಲೆ ಕೆಡಿಸಿಕೊಳ್ಳುವ ಅಗತ್ಯವೇ ಇವರಿಗೆ ಕಂಡು ಬರುತ್ತಿಲ್ಲವೇ? ಸ್ತ್ರೀಯರಿಗೆ ಗೌರವ ಕೊಡಬೇಕು ಎನ್ನುವ ಬಾಯಲ್ಲೇ ಮನುವಿನಂತಹವರು 'ಸ್ತ್ರೀ ಸ್ವಾತಂತ್ರ್ಯಕ್ಕೆ ಅರ್ಹಳೇ ಅಲ್ಲ' ಎಂದಿದ್ದಾರಲ್ಲಾ. ಯಾವ ಕಾಲದಲ್ಲೂ, ಯಾವ ದೇಶದಲ್ಲೂ, ಯಾವ ಸಮಾಜದಲ್ಲೂ ಪುರುಷ ಸಮಾಜ ಮಹಿಳೆಯನ್ನು ಗೌರವದಿಂದ, ಸಮಾನ ಭಾವದಿಂದ ಕಂಡೇ ಇಲ್ಲ. ಸ್ತ್ರೀಯ ಅವಶ್ಯಕತೆ ಪುರುಷನಿಗೆ ಸದಾಕಾಲ ಇದ್ದೇ ಇರುತ್ತದಾದ್ದರಿಂದ ಅವಳನ್ನು ಹೊಗಳುತ್ತಲೇ ಅವಳು ತನ್ನನ್ನೇ ಆಶ್ರಯಿಸಿಕೊಂಡಿರುವುದಕ್ಕೆ ಬೇಕಾದ ಎಲ್ಲಾ ನಿಯಮಗಳನ್ನು ಮಾಡಿದೆ. ಎಲ್ಲ ಧರ್ಮಗಳಲ್ಲೂ ಸ್ತ್ರೀ ಪಾಪದ ಮೂಲ, ಪುರುಷನ ಸಾಧನೆಯ ಮಾರ್ಗದಲ್ಲಿ ಅಡ್ಡವಾಗಿ ನಿಲ್ಲುವ ಅಡಚಣೆ ಎಂದೇ ಭಾವಿಸಲಾಗಿತ್ತು.

ಖ್ಯಾತ ಬಂಗಾಳಿ ಕಾದಂಬರಿಕಾರ ಶರಶ್ಚಂದ್ರರು ತಮ್ಮ ಒಂದು ಲೇಖನದಲ್ಲಿ ಹೇಳಿದ್ದಾರೆ ಸ್ತ್ರೀಯರನ್ನು ಅವರ ವ್ಯಕ್ತಿತ್ವಕ್ಕಾಗಿಯೇ ಗೌರವಿಸದೆ, ಈ ಗೌರವವು ಅವರ ಸಂತಾನ ಮತ್ತು ಪುತ್ರ ಪ್ರಸವವನ್ನು ಮಾತ್ರ ಅವಲಂಬಿಸಿರುತ್ತದೆ. ಪುರುಷನ ದೃಷ್ಟಿಯಲ್ಲಿ ಸ್ತ್ರೀ ಜೀವನದ ಉದ್ದೇಶ ಇದೊಂದೇ ಆದದ್ದಾದರೆ ಅದು ಅವಳ ಗೌರವದ ಮಾತೇನಲ್ಲ.

ವೀರ ಯುಗದಲ್ಲಂತೂ ಮಹಿಳೆ ಪುರುಷನ ನೆರಳಾಗಿ ಮಾತ್ರ ಬಾಳಿದಳು ಎನ್ನುವುದು ಎಲ್ಲರಿಗೂ ತಿಳಿದಿರುವ ವಿಚಾರ "ಜ್ಞಾನವು ಪುರುಷನ ಗೌರವವನ್ನು ಹೆಚ್ಚಿಸಿದರೆ ಅಜ್ಞಾನವು ಸ್ತ್ರೀಯರ ಸೌಂದರ್ಯವನ್ನು ಹೆಚ್ಚಿಸುತ್ತದೆ' ಎನ್ನುವ ಗಾದೆ ಮಾತೊಂದು ಚೀನದಲ್ಲಿ ಪ್ರಚಲಿತವಾಗಿದೆಯಂತೆ. 'ತಾನು ಬುದ್ದಿವಂತಳಾಗಬೇಕೆಂದು ಆಶಿಸಿದರೆ ಅದು ಸ್ತ್ರೀಯ ಮಹಾ ದುರ್ಗುಣ.' ಎಂದು ಯುರೋಪಿನ ಧರ್ಮ ಬೋಧಕರು ಸ್ಪಷ್ಟ ಪಡಿಸಿದ್ದಾರೆ. ಈ ಮಾತುಗಳನ್ನು ಇಷ್ಟೊಂದು ದೀರ್ಘವಾಗಿ ಪ್ರಸ್ತಾಪಿಸುತ್ತಿರುವುದಕ್ಕೆ ಕಾರಣ: ಇಂತಹ ಹಿನ್ನೆಲೆಯಲ್ಲಿ

ಬದುಕುತ್ತಿರುವ ಮಹಿಳೆ ಪುರುಷನಿಗೆ ಸ್ಪರ್ಧಿಯಾಗಿದ್ದಾಳೆ ಎನ್ನುವ ಮಾತು ಎಷ್ಟೊಂದು ಅಸಹಜ, ಎನ್ನುವುದನ್ನು ಸ್ಪಷ್ಟ ಪಡಿಸಲು.

ಗಂಡಾಗಲಿ, ಹೆಣ್ಣಾಗಲಿ, ಒಬ್ಬ ವ್ಯಕ್ತಿಗೆ ಆತ್ಮ ವಿಶ್ವಾಸವನ್ನು ತಂದುಕೊಡುವ ಅಂಶಗಳು ಮೂರು: ವಿದ್ಯೆ, ಸಂಪತ್ತು (ಆಸ್ತಿಯ ಮೇಲಿನ ಒಡೆತನ) ಮತ್ತು ಅಧಿಕಾರ. ಈ ಮೂರರಿಂದಲೂ ಮಹಿಳೆ ವಂಚಿತಳಾಗಿದ್ದಾಳೆ. ಆದ್ದರಿಂದಲೇ ಅವಳು ಪುರುಷನ ಕೈಯಲ್ಲಿ ಬೊಂಬೆಯಾಗಿದ್ದಾಳೆ, ಎನ್ನುವುದು ಸೂರ್ಯಪ್ರಕಾಶದಷ್ಟೇ ಸತ್ಯ.

ಇದು ಲೇಖಕಿಯರ ಸಮ್ಮೇಳನ. ಸಾಹಿತ್ಯದ ಬಗ್ಗೆ ಮಾತನಾಡದೆ ಅಧ್ಯಕ್ಷೆ ಸ್ತ್ರೀಯರ ಸಾಮಾಜಿಕ ಸ್ಥಿತಿಯ ಬಗ್ಗೆಯೇ ಹೆಚ್ಚಾಗಿ ಮಾತನಾಡುತ್ತಿದ್ದಾರಲ್ಲಾ, ಎಂದು ನಿಮಗೆಲ್ಲಾ ಅನ್ನಿಸಿರಬಹುದು. ಇದು ಲೇಖಕಿಯರ ಸಮ್ಮೇಳನ. ಆದ್ದರಿಂದಲೇ ಈ ಬಗ್ಗೆ ಇಷ್ಟು ಕಾಳಜಿಯಿಂದ ನಾನು ಮಾತನಾಡುತ್ತಿದ್ದೇನೆ. ಯಾರು ಏನು ಬರೆಯಬೇಕು ಎನ್ನುವುದನ್ನು ಬೇರೆಯವರು ಒತ್ತಾಯ ಪಡಿಸುವುದು ಸಾಧ್ಯವಿಲ್ಲ, ಎನ್ನುವುದು ನನಗೆ ಗೊತ್ತು. ಆದರೆ ಈಗ ಲೇಖಕಿಯರ ಜವಾಬ್ದಾರಿ ಹೆಚ್ಚಾಗಿದೆ. ಅವರ ಬರಹಗಳ ಕಡೆಗೂ ಸಮಾಜ ಗಮನಕೊಡಬೇಕಾಗುತ್ತದೆ. ಇಂತಹ ಸಮಯದಲ್ಲಿ ಸವೆದು ಹೋದ ಹಳೆಯ ಮೌಲ್ಯಗಳನ್ನೇ ವೈಭವೀಕರಿಸುತ್ತ, ತ್ಯಾಗ, ಪ್ರೀತಿಗಳ ಹೆಸರಿನಲ್ಲಿ ಬಕೇಟುಗಟ್ಟಲೆ ಕಣ್ಣೀರು ಸುರಿಸುವ ಸ್ತ್ರೀ ಪಾತ್ರಗಳ ಸೃಷ್ಟಿ ಇನ್ನು ಸಾಕು. ಹಾಗೆ ನೋಡಿದರೆ ತ್ಯಾಗ ಮಾಡುವುದಕ್ಕೆ ಹೆಣ್ಣಿನ ಬಳಿ ಏನಿದೆ? ಬಂದೂಕು, ಪಿಸ್ತೂಲುಗಳನ್ನು ಹಿಡಿದು ಮೇಲೆ ಬಿದ್ದಾಗ ಎಂತಹ ಜಿಪುಣನೂ ತನ್ನಲ್ಲಿರುವುದನ್ನು ದರೋಡೆಕಾರನಿಗೆ ಒಪ್ಪಿಸಲೇಬೇಕು. ಅನೇಕ ಸಂದರ್ಭಗಳಲ್ಲಿ ನಮ್ಮ ಹೆಣ್ಣುಮಕ್ಕಳ ತ್ಯಾಗವೂ ಇಂತಹ ಒತ್ತಾಯದ ಫಲವೇ ಎಂದು ನನಗನ್ನಿಸುತ್ತದೆ. ಆರ್ಥಿಕವಾಗಿ ತನ್ನ ಕಾಲ ಮೇಲೆ ತಾನು ನಿಲ್ಲಲಾರದ ಹೆಣ್ಣು, ಗಂಡ ಬೇರೊಬ್ಬ ಹೆಂಗಸನ್ನು ಮದುವೆಯಾದಾಗ ಅಥವಾ ಬೇರೆಯವಳೊಡನೆ ಸಂಬಂಧ ಬೆಳೆಸಿದಾಗ ಸುಮ್ಮನೆ ಸಹಿಸಿಕೊಂಡರೆ ಅದನ್ನು ತ್ಯಾಗ ಎನ್ನಬಹುದೇ? ಪ್ರಸಿದ್ಧ ಪಂಜಾಬಿ ಲೇಖಕಿ ಅಮೃತಾಪ್ರೀತಮ್ ಹೇಳುವಂತೆ ಹೆಣ್ಣಿಗೆ ತನ್ನದೇ ಆದ ಒಂದು ಮನೆಯೂ ಇಲ್ಲ. ಚಿಕ್ಕಂದಿನಲ್ಲಿ ತಂದೆಯ ಮನೆ, ವಯಸ್ಸಾನ ಮೇಲೆ ಮಗನ ಮನೆ. ಮೂರು ಜನರು ಕೈಬಿಟ್ಟಾಗ ಬೀದಿಯೇ ಅವಳ ಮನೆ. ಇಂತಹ ಪರಿಸ್ಥಿತಿಯಲ್ಲಿ ಹೆಣ್ಣಿನ ತ್ಯಾಗಕ್ಕೆ ಅರ್ಥವಾದರೂ ಏನಿದೆ?

ಹೀಗೆಂದ ಮಾತ್ರಕ್ಕೆ ಲೇಖಕಿಯರು ಪ್ರೇಮ, ತ್ಯಾಗಗಳ ಕಥೆಗಳನ್ನು ಬರೆಯಲೇಬಾರದೋ ಎಂದರೆ, ಅದು ಹಾಗಲ್ಲ, ನಮ್ಮ ಸೋದರ ಕವಿಯೊಬ್ಬರು ಹೇಳಿರುವ ಹಾಗೆ, 'ಪ್ರೇಮದ ಕಥೆಗೆ ಕೊನೆಯಲ್ಲಿ ರಾಧಾಕೃಷ್ಣರು ಇರುವನಕ, ಗಂಡು ಹೆಣ್ಣಿನ ಆಕರ್ಷಣೆಯಾಗಲೀ, ಮಗುವನ್ನು ಹೆತ್ತು ಹೊತ್ತು ಬೆಳಸುವ ಆನಂದವಾಗಲೀ ಚಿರನೂತನವಾದದ್ದು. ಚಂದ್ರಮಂಡಲ ಕಲ್ಲುಗುಡ್ಡಗಳಿಂದ ಕೂಡಿದ ಒರಟು ಭೂಮಿ ಎನ್ನುವುದು ವೈಜ್ಞಾನಿಕ ಸತ್ಯವೇ ಆದರೂ ಚಂದ್ರನನ್ನು ಕಂಡಾಗ ಆನಂದವಾಗುತ್ತದೆ. ಬೆಳದಿಂಗಳು ದೇಹಕ್ಕೆ, ಮನಸ್ಸಿಗೆ ತಂಪು ನೀಡುತ್ತದೆ. ಹಾಗೆಯೇ ಈ ಪ್ರೇಮ, ತಾಯ್ತನಗಳು. ಆದರೆ ಸ್ತ್ರೀಯ ವ್ಯಕ್ತಿತ್ವ ಇಷ್ಟಕ್ಕೆ ಸೀಮಿತ ಆಗಿಬಿಡಬಾರದು.

'ಅಚಲ' ಪತ್ರಿಕೆಯಲ್ಲಿ ಶ್ರೀ ರಂಜಾನ್ ದರ್ಗಾ ಬರೆದಿರುವಂತೆ 'ಮಹಿಳಾ ಸ್ವಾತಂತ್ರ್ಯ ಎಂಬುದು ಇಡೀ ಸಮಾಜವನ್ನು ಬಿಡುಗಡೆಗೊಳಿಸುವ ಬಯಕೆಯ ಸಂಕೇತ' ಮಹಿಳೆಯ ಸ್ವಾತಂತ್ರ್ಯ ಪುರುಷನ ಸ್ವಾತಂತ್ರ್ಯಕ್ಕೆ ಪೂರಕವಾಗಿದೆ. ಆತ ದುರಭಿಮಾನದಿಂದ ಕೂಡಿದ ಮೇಲರಿಮೆಯಿಂದ ನರಳುತ್ತಿರುವ ಕಾರಣ ಸ್ವಾತಂತ್ರ್ಯವನ್ನು ಅನುಭವಿಸಲು ಅನರ್ಹನಾಗಿದ್ದಾನೆ. ಸ್ತ್ರೀ ಸ್ವಾತಂತ್ರ್ಯ ಪಡೆದ ನಂತರವೇ ಪುರುಷ ತನ್ನ ಅಹಂಕಾರದಿಂದ ಮುಕ್ತನಾಗುವನು. ಮಹಿಳೆಯನ್ನು ಗೌರವಿಸುವ ಮೂಲಕ ಮಾತ್ರ ಆತನು ಗೌರವಕ್ಕೆ ಅರ್ಹನಾಗುವನು. ಇಂತಹ ಮಾತುಗಳನ್ನು ಇಂದಿನ ಸ್ತ್ರೀಪುರುಷರಿಬ್ಬರೂ ಅರ್ಥ ಮಾಡಿಕೊಳ್ಳಬೇಕು.

ಇನ್ನು ಸಾಹಿತ್ಯ ಪ್ರಪಂಚದಲ್ಲಿ ಮಹಿಳೆಗೆ ಸಿಗಬೇಕಾದ ಸ್ಥಾನ ಇನ್ನು ಸಿಕ್ಕಿಲ್ಲ ಎನ್ನುವುದನ್ನು ನಾವು ಮತ್ತೆ ಮತ್ತೆ ಹೇಳಬೇಕಾಗುತ್ತದೆ. ಇಷ್ಟು ಜನ ಪ್ರತಿಭಾವಂತ ಲೇಖಕಿಯರು ಇದ್ದರೂ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ ಅವರಿಗೆ ದೊರಕಿಲ್ಲ. ಸಾಹಿತ್ಯ ಅಕಾಡೆಮಿಯಂತಹ ಸಂಸ್ಥೆಯ ಅಧ್ಯಕ್ಷೆಯಾಗಿಯೂ ಒಬ್ಬರನ್ನೂ ನೇಮಕ ಮಾಡಲಾಗಿಲ್ಲ. ಅಧ್ಯಕ್ಷತೆ ಹಾಗಿರಲಿ, ಸಾಹಿತ್ಯ ಪರಿಷತ್ತು, ಅಕಾಡೆಮಿಗಳಂತಹ ಸಂಸ್ಥೆಗಳಲ್ಲಿ ಒಬ್ಬರು ಇಬ್ಬರನ್ನು ಮಾತ್ರ ಆಯ್ಕೆ ಮಾಡಲಾಗುತ್ತದೆ. ಇದುವರೆಗೂ ಕನ್ನಡದ ಒಬ್ಬ ಲೇಖಕಿಗೆ, ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ದೊರಕಿಲ್ಲ. ಸಂಸತ್ತಿನಲ್ಲಿ, ವಿಧಾನ ಸಭೆಗಳಲ್ಲಿ ಮಹಿಳೆಯರ ಸಂಖ್ಯೆ ಬೆರಳೆಣಿಕೆಯಷ್ಟು ಇಲ್ಲ. ಮೀಸಲಾತಿಯ ಕಾರಣದಿಂದ ಕೆಲವು ಗ್ರಾಮಪಂಚಾಯ್ತಿ ಅಧ್ಯಕ್ಷೆಯರಾಗಿ ಅವರ ಮನೆಯ ಗಂಡಸರೇ ಆಡಳಿತ ನಡೆಸುತ್ತಿರುತ್ತಾರೆ, ಎನ್ನುವ ಸುದ್ದಿಯನ್ನು ನಾವು ಪತ್ರಿಕೆಗಳಲ್ಲಿ ನೋಡುತ್ತಲೇ ಇರುತ್ತೇವೆ. ಇಂತಹ ಅಸಮಾನತೆ ದೂರವಾಗಲು ಲೇಖಕಿ ಕೂಡ ತನ್ನ ಪ್ರಯತ್ನವನ್ನು ನಿರಂತರವಾಗಿ ಮುಂದುವರಿಸುತ್ತಲೇ ಇರಬೇಕಾಗುತ್ತದೆ.

ಕೊನೆಯದಾಗಿ ವಿಶ್ವಸುಂದರಿ ಸ್ಪರ್ಧೆಯ ಬಗ್ಗೆ ಎರಡು ಮಾತು, ಇಂತಹ ಸ್ಪರ್ಧೆ ಭಾರತೀಯ ಸಂಸ್ಕೃತಿಗೆ ವಿರುದ್ಧವಾದದ್ದು ಎನ್ನುವುದು ಕೇವಲ ಆಡಂಬರದ ಮಾತು. ಇದಕ್ಕಿಂತ ಕೆಟ್ಟ ಸಂಪ್ರದಾಯಗಳು ನಮ್ಮಲ್ಲಿವೆ. ಆದರೆ 21ನೆಯ ಶತಮಾನದ ಹೊಸ್ತಿಲಲ್ಲಿ ನಿಂತಿರುವ ಇಂದಿನ ಮಹಿಳೆ ಈಗೀಗ ತನ್ನತನದ ಅರಿವನ್ನು ಬೆಳೆಸಿಕೊಳ್ಳುತ್ತಿದ್ದಾಳೆ. ಮತ್ತೆ ದೇಹಸೌಂದರ್ಯಕ್ಕಷ್ಟೇ ಅವಳ ಮನಸ್ಸನ್ನು ಸೀಮಿತಗೊಳಿಸುವ

ಇಂತಹ ಸ್ಪರ್ಧೆಗಳು, ಜಾಹೀರಾತುಗಳು, ಫ್ಯಾಷನ್ ಶೋಗಳನ್ನು ಮಹಿಳೆಯರೆಲ್ಲಾ ಒಂದಾಗಿ ವಿರೋಧಿಸಬೇಕು, ಮಹಿಳೆಯ ಬೌದ್ಧಿಕ, ವೈಚಾರಿಕ ಬೆಳವಣಿಗೆಗೆ ಇಂತಹ ಸ್ಪರ್ಧೆಗಳು ಮಾರಕ ಎನ್ನುವುದು ನನ್ನ ಸ್ಪಷ್ಟ ಅಭಿಪ್ರಾಯ.

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಅನೇಕ ಪ್ರತಿಭಾವಂತ ಲೇಖಕಿಯರು ತಮ್ಮ ಬರವಣಿಗೆಯಲ್ಲಿ ತೊಡಗಿಕೊಂಡಿದ್ದಾರೆ. ಸಾರಾ ಅಬೂಬಕ್ಕರ್, ವೈದೇಹಿ, ಚಂದ್ರಕಲಾ, ಪದ್ಮಾ ಶಣೈ.., ಹೀಗೆ ಈ ಪಟ್ಟಿ ಸಾಕಷ್ಟು ಉದ್ದವಾಗಿಯೇ ಇದೆ. ಇವರಲ್ಲಿ ಹೆಚ್ಚಿನವರು ಈ ಸಮ್ಮೇಳನದಲ್ಲಿ ಭಾಗವಹಿಸುತ್ತಿರುವುದು ಸಂತೋಷದ ವಿಚಾರ. ನಾಡಿನ ಬೇರೆ ಭಾಗಗಳಿಂದಲೂ ಖ್ಯಾತ ಲೇಖಕಿಯರು ಆಗಮಿಸಿದ್ದೀರಿ. ಇವರೆಲ್ಲರ ಮುಂದೆ ಹಾಗೂ ಅಭಿಮಾನಿಗಳ ಮುಂದೆ ಸಮ್ಮೇಳನದ ಅಧ್ಯಕ್ಷೆಯಾಗಿ ಮಾತನಾಡಲು ಅವಕಾಶ ಮಾಡಿಕೊಟ್ಟ ಲೇಖಕಿಯರ ಸಂಘದ ಅಧ್ಯಕ್ಷೆ ನಾಗಮಣಿ ಎಸ್.ರಾವ್, ಕರಾವಳಿ ಲೇಖಕಿಯರ ಸಂಘದ ಅಧ್ಯಕ್ಷೆ ಮನೋರಮಾ ಎಂ. ಭಟ್ ಮತ್ತು ಸಂಘದ ಪದಾಧಿಕಾರಿಗಳಿಗೆ ನನ್ನ ಕೃತಜ್ಞತಾ ಪೂರ್ವಕ ಧನ್ಯವಾದಗಳು. ಎಲ್ಲರಿಗೂ ನಮಸ್ಕಾರ.

*ಕಳೆದ ನವೆಂಬರ್ 2, 3, 1996 ರಲ್ಲಿ ಮಂಗಳೂರಿನಲ್ಲಿ ನಡೆದ 4ನೇ ಅಖಿಲ ಕರ್ನಾಟಕ ಲೇಖಕಿಯರ ಸಮ್ಮೇಳನದ ಅಧ್ಯಕ್ಷೆಯಾಗಿದ್ದ ಶ್ರೀಮತಿ ಎಚ್.ಎಸ್. ಪಾರ್ವತಿಯವರ ಭಾಷಣದ ಸಂಗ್ರಹವಿದು.*

*- ಸಂ.*

4ನೇ ಅಖಿಲ ಕರ್ನಾಟಕ ಲೇಖಕಿಯರ ಸಮ್ಮೇಳನದಲ್ಲಿ ಅಂಗೀಕೃತವಾದ ಎರಡು ನಿರ್ಣಯಗಳು:

★ ಬೆಂಗಳೂರಿನಲ್ಲಿ ಎ.ಬಿ.ಸಿ.ಎಲ್. ಸಂಸ್ಥೆಯು ಸರ್ಕಾರದ ನೆರವಿನಿಂದ ನಡೆಸುತ್ತಿರುವ ಸೌಂದರ್ಯ ಸ್ಪರ್ಧೆಯನ್ನು ಸಮ್ಮೇಳನ ತೀವ್ರವಾಗಿ ಖಂಡಿಸಿತು.

★ ಸಂಸದೀಯ ಸ್ಥಾನಗಳಿಗೆ ಸಂಬಂಧಿಸಿದಂತೆ, ರಾಜ್ಯ ವಿಧಾನ ಸಭೆಗಳು ಹಾಗೂ ಲೋಕಸಭೆಯಲ್ಲಿ ಶೇಕಡ 33 1/3 ರಷ್ಟು ಸ್ಥಾನವನ್ನು ಯಾವುದೇ ಕಾರಣಕ್ಕೂ ಕಡಿಮೆ ಮಾಡಬಾರದೆಂದು ರಾಜ್ಯ ಮಟ್ಟದ ಲೇಖಕಿಯರ ಸಮ್ಮೇಳನ ಒತ್ತಾಯಿಸಿತು.

★ ಇಂತಹ ಶೇಕಡ 33/ 1/3ರ ಮೀಸಲಾತಿ ಸರ್ಕಾರದ ಎಲ್ಲ ನೀತಿ ನಿರ್ಧಾರ ಸಂಸ್ಥೆಗಳಿಗೂ ಅನ್ವಯಿಸುವಂತೆ ಕಾನೂನಾಗಬೇಕು ಎಂದು ಸಮ್ಮೇಳನ ಒತ್ತಾಯಿಸಿತು.

ರಾಜಕೀಯವಾಗಿ ಬುಡಮಟ್ಟ ದಿವಾಳಿ ಎದ್ದಿರುವ ಭಾರತ ಸರ್ಕಾರ ಕಳೆದ ಐದು ವರ್ಷಗಳಿಂದ 'ಜಾಗತೀಕರಣ' ಮತ್ತು 'ಉದಾರೀಕರಣ'ದ ನೀತಿಯನ್ನು ಅನುಸರಿಸುತ್ತಿದೆ. ಈ ಅವಧಿಯಲ್ಲಿ ಈ ನೆಲದಲ್ಲಿ ಹೂಡಲಾಗಿರುವ ಪಾಶ್ಚಿಮಾತ್ಯ ಬಂಡವಾಳ ಹೂಡಿಕೆಯು ಅತಿ ಕಡಿಮೆ ಪ್ರಮಾಣದ್ದಾಗಿದೆ. ಏಕೆಂದರೆ ಅವರಿನ್ನೂ ಹೆಚ್ಚಿನ ಅನುಕೂಲಕರ ಪರಿಸ್ಥಿತಿಗಾಗಿ ಕಾಯುತ್ತಿದ್ದಾರೆ. ಆದರೆ ಸಾಂಸ್ಕೃತಿಕ ಕಲಾ ರೂಪಗಳಿಂದ ಹಿಡಿದು ಗ್ರಾಹಕ ಸಿದ್ಧಾಂತಗಳೆಲ್ಲದರ ಮಹಾಪೂರವನ್ನು ಭಾರತದ ಸಮಾಜದೊಳಕ್ಕೆ ಈ ಐದು ವರ್ಷಗಳಲ್ಲಿ ಹರಿಯಬಿಟ್ಟಾಗಿದೆ.

- ಐಜಾಜ್ ಅಹಮದ್.

ಇಷ್ಟಿಷ್ಟೇ ಅಳತೆಗಳು, ಇದೇ ಸೌಂದರ್ಯ ಎಂದು ಬಿತ್ತುವ ಜಾಹಿರಾತುಗಳ ಅಬ್ಬರದಲ್ಲಿ ಹೆಣ್ಣು ತನ್ನೆಲ್ಲ ಸಾಧ್ಯತೆಗಳನ್ನು ಮರೆತು ಕೇವಲ ತನ್ನ ದೇಹ ಸೌಂದರ್ಯದ ಗೀಳಿಗೆ ರೋಗಕ್ಕೆ ಗುರಿಯಾಗುತ್ತಾಳೆ. ಅಮೆರಿಕೆಯಲ್ಲಿ ತೆಳುದೇಹದ ಗೀಳಿನಲ್ಲಿ, ಉಪವಾಸ ಬಿದ್ದು, ಒಂದು ವರ್ಷಕ್ಕೆ 1,50,000 ಎಳೆಯ ಯುವತಿಯರು 'ಅನೊರೆಕ್ಷಿಯಾ' ಎಂಬ ರೋಗಕ್ಕೆ ಬಲಿಯಾಗಿ ಸಾಯುತ್ತಾರೆ ಎಂದರೆ ಆಶ್ಚರ್ಯವಾಗಬಹುದು. ಈ ರೋಗದ ಲಕ್ಷಣಗಳು obsessive preoccupation with slimness, a neurotic phenomena, resulting in abnormal behaviour. ಈ ರೋಗವನ್ನು ನಾವು ಭಾರತದಲ್ಲಿ ಕಂಡಿರಲಿಲ್ಲ. ಆದರೆ ಇಂದು ನಿಮ್ಹಾನ್ಸ್‌ನಲ್ಲಿ ತಿಂಗಳಿಗೆ ಐದು ಇಂಥ ಕೇಸುಗಳು ಬರುತ್ತವೆ. ವಿದೇಶದ ಸೌಂದರ್ಯ ಸಾಧನಗಳೊಡನೆ ನಾವು ಈ ಸೌಂದರ್ಯದ ಗೀಳು ರೋಗಗಳನ್ನೂ ಕೊಂಡು ತರುತ್ತಿದ್ದೇವೆ.

# ಸಮಗ್ರ ಪ್ರತಿಭಟನೆಯೊಂದೇ ದಾರಿ

- ಕ್ಯಾಪ್ಟನ್ ಲಕ್ಷ್ಮಿ

ಜನವರಿ 23, 1997ನ್ನು ಇಡೀ ರಾಷ್ಟ್ರವೇ ದೇಶಾಭಿಮಾನದ ದಿನವನ್ನಾಗಿ ಆಚರಿಸುತ್ತದೆ; ದೇಶದ ಹೆಮ್ಮೆಯ ಪುತ್ರ ನೇತಾಜಿ ಸುಭಾಷ್‌ಚಂದ್ರ ಬೋಸರ ಜನ್ಮಶತಾಬ್ದಿ ದಿನ. ಈ ಸ್ಮರಣೆಯ ನೆನಪಿಗೆ, ಸುಭಾಷ್‌ರ ಒಡನಾಡಿಯಾಗಿದ್ದ, ಅವರ ಇಂಡಿಯನ್ ನ್ಯಾಷನಲ್ ಆರ್ಮಿಯಲ್ಲಿ ಝಾನ್ಸಿ ರಾಣಿ ರೆಜಿಮೆಂಟ್‌ನ ಕ್ಯಾಪ್ಟನ್ ಆಗಿದ್ದ ಡಾ|| ಲಕ್ಷ್ಮಿ ಸೆಹಗಾಲ್‌ರವರೊಡನೆ ಅಚಲ ಇತ್ತೀಚೆಗೆ ನಡೆಸಿದ ಸಂದರ್ಶನವನ್ನು ಇಲ್ಲಿ ಪ್ರಕಟಿಸುತ್ತಿದ್ದೇವೆ.

ಹದಿನೈದು ವರ್ಷಗಳ ಹಿಂದೆ ಮದ್ರಾಸಿನಲ್ಲಿ ನಡೆದ ರಾಷ್ಟ್ರೀಯ ಮಹಿಳಾ ಸಮ್ಮೇಳನವೊಂದರಲ್ಲಿ ಕ್ಯಾಪ್ಟನ್ ಲಕ್ಷ್ಮಿಯೊಡನೆ ಸಮಯ ಕಳೆಯುವ ಸದವಕಾಶ ನನಗೊದಗಿತ್ತು. ಆ ಸಮ್ಮೇಳನಕ್ಕೆ ಕರ್ನಾಟಕದ ಪ್ರತಿನಿಧಿಗಳಾಗಿ ಹೋಗಿದ್ದ ನಾನು ಮತ್ತು ವಿಮಲಾಳನ್ನು ಅತ್ಯಂತ ಪ್ರೀತಿಯಿಂದ ಆದರಿಸಿದ ಆ ಸಮ್ಮೇಳನದ ನಾಯಕಿಯರಲ್ಲೆಲ್ಲ ಇವರೇ ಹೆಚ್ಚು ನೆನಪಿಗೆ ಬರುವವರು. ಸಹಜವಾಗಿ ಇಂದಿಗಿಂತ ಹೆಚ್ಚು ಚೈತನ್ಯದ ಚಿಲುಮೆಯಾಗಿದ್ದ ಕ್ಯಾಪ್ಟನ್ ಲಕ್ಷ್ಮಿ ಮೂರುದಿನ ನಡೆದ ಸಮ್ಮೇಳನದ ಉಸಿರಾಗಿದ್ದರು. ಅವರ ವ್ಯಕ್ತಿತ್ವದ ಪ್ರಭಾವ ಸಭೆಗಳ ಎಲ್ಲಾ ನಡಾವಳಿಗಳ ಮೇಲೂ ಅಚ್ಚೊತ್ತಿತ್ತು. ಎಲ್ಲಾ ರಾಜ್ಯಗಳ ಗೀತೆಯನ್ನು ಅಲ್ಲಿನ ಸಮೂಹಗಾಯನದವರು ಹಾಡುತ್ತಿದ್ದಾಗ ಕನ್ನಡದ ಹಾಡು ಇನ್ನೂ ಬಂದಿರಲಿಲ್ಲ. ಆಗ ಸುಮ್ಮನೆ ಕೂತಿದ್ದ ನಮ್ಮ ಬಳಿ ಬಂದು, 'ನಿಮ್ಮ ಕನ್ನಡ ಹಾಡು ಬಂದಿಲ್ಲವೆಂದು ಬೇಸರವೇ? ಹಾಡಿಸುವೆ.' ಎಂದು ನಮಗೆ ಹೇಳಿ ಅಲ್ಲಿ ಹೋಗಿ ಕನ್ನಡದ ಹಾಡು ಹೇಳಲು ಹೇಳಿದರು. ಆ ಆತ್ಮೀಯತೆಯ ನೆನಪು ಚಿರಕಾಲ ನನ್ನಲ್ಲಿ ಉಳಿದಿದೆ. ಅಂತಹ ಲಕ್ಷ್ಮಿ ಬೆಂಗಳೂರಿನಲ್ಲಿ ನಡೆದ ವಿಶ್ವಸುಂದರಿ ಸ್ಪರ್ಧೆಯ ವಿರೋಧಿ ಮೆರವಣಿಗೆಯನ್ನು ಉದ್ಘಾಟಿಸಲು ಬರುವರೆಂದಾಗ ನನಗೆ ಮೈನವಿರೆದ್ದಿತು. ಒಂದು ಬೃಹತ್ ಜನಸಾಗರದಂತಿದ್ದ ಮೆರವಣಿಗೆಯನ್ನು ಉದ್ಘಾಟಿಸಿದ ಲಕ್ಷ್ಮಿಗೂ ಮೈ ತುಂಬಿ ಬಂದಿತ್ತು. ಜನರೂ ಅವರ ಮಾತುಗಳನ್ನು ಉತ್ಸಾಹದಿಂದ ಕೇಳುತ್ತಿದ್ದರು. ಬಿಡುವಿಲ್ಲದ ಪತ್ರಕರ್ತರ ಸಂದರ್ಶನದ ನಡುವೆಯೂ ಲಕ್ಷ್ಮಿ ಮಾತನಾಡಲು ಸಿಕ್ಕಿದರು. ವಿಮಾನ ನಿಲ್ದಾಣಕ್ಕೆ ಹೋಗುವ ಅವಸರದಲ್ಲಿದ್ದ ಲಕ್ಷ್ಮಿಯವರು ತಮ್ಮ ಸಂದರ್ಶನವನ್ನು 'ಅಚಲ'ಕ್ಕಾಗಿ ನೀಡಿದ್ದುದು ಇಲ್ಲಿದೆ.

**ಅಚಲ :-** ನೀವು ಸ್ವಾತಂತ್ರ್ಯಪೂರ್ವ ಮತ್ತು ಸ್ವಾತಂತ್ರ್ಯಾನಂತರದ ಎರಡೂ ಸಂದರ್ಭಗಳ ಮಹಿಳಾ ಚಳುವಳಿಯನ್ನು ಕಂಡಿದ್ದೀರಿ; ಅದರಲ್ಲಿ ಭಾಗವಹಿಸಿದ್ದೀರಿ. ಇವೆರಡರ ನಡುವೆ ಎದ್ದು ಕಾಣುವ ವ್ಯತ್ಯಾಸವೇನಾದರೂ ಇದೆಯೇ?



**ಲಕ್ಷ್ಮಿ :-** ಹೌದು; ಒಂದು ರೀತಿಯಲ್ಲಿ ವ್ಯತ್ಯಾಸವಿದೆ. ಅದೆಂದರೆ ಸ್ವಾತಂತ್ರ್ಯಪೂರ್ವದಲ್ಲಿ ಮಹಿಳೆಯರು ಚಳುವಳಿಯಲ್ಲಿದ್ದರೂ ದೇಶದ ಸ್ವಾತಂತ್ರ್ಯವೇ ನಮ್ಮ ಕಣ್ಣ ಮುಂದಿನ ಗುರಿಯಾಗಿತ್ತು. ಮಹಿಳೆಯರು ಈ ಸ್ವಾತಂತ್ರ್ಯಾಂದೋಲನದಲ್ಲಿ ಭಾಗವಹಿಸಿದ್ದರು. ಅದನ್ನು ಮಹಿಳಾ ಚಳುವಳಿಯೆಂದು ಕರೆಯಿರಿ, ಬಿಡಿ. ಆದರೆ ದೇಶದ ಬಿಡುಗಡೆಗಾಗಿ ಅಸಂಖ್ಯ ಸಂಖ್ಯೆಯ ಮಹಿಳೆಯರು ಬೀದಿಗಿಳಿದರು. ಇಂದು ಪರಿಸ್ಥಿತಿ ಬದಲಾಗಿದೆ. ಸ್ವಾತಂತ್ರ್ಯ ಬಂದ ನಂತರ ದೇಶದ ಸ್ಥಿತಿ ಇದಕ್ಕಿದ್ದಂತೆ ಬದಲಾಗಲಿಲ್ಲ. ದೇಶದಲ್ಲಿ ಹೆಚ್ಚಿದ ಔದ್ಯೋಗೀಕರಣ, ನಗರೀಕರಣದಿಂದ ಎಲ್ಲವೂ ಮಹಿಳೆಯರಿಗೆ ಅನುಕೂಲವಾದಷ್ಟೇ ಸಮಾಜದಲ್ಲೂ ಹಲವಾರು ಸಮಸ್ಯೆಗಳು ಸೃಷ್ಟಿಯಾದವು. ಈ ಸಮಸ್ಯೆಗಳು ಹೆಣ್ಣನ್ನು ಒಂದು ಸರಕಾಗಿ ಕಾಣುವಂತೆ ಮಾಡಿದವು. ಈ ಸರಕು ಸಂಸ್ಕೃತಿಯ ವಿರುದ್ಧ ಹೋರಾಡುವುದೇ ಇಂದಿನ ಮಹಿಳಾ ಚಳುವಳಿಯ ಮುಖ್ಯ ಸವಾಲಾಗಿದೆ.

**ಅಚಲ :-** ನೀವು ಸ್ವಾತಂತ್ರ್ಯ ಹೋರಾಟದಲ್ಲಿದ್ದಾಗ ಮಹಿಳೆಯರಿಗೆ ಸಂಬಂಧಿಸಿದ ವಿಷಯಗಳಿಗೆ ಎಷ್ಟು ಗಮನ ಕೊಡಲಾಗುತ್ತಿತ್ತು? ವಿಶೇಷವಾಗಿ ನೀ ವಿದ್ದ INA ಸೇನೆಯಲ್ಲಿ ಅದರ ಪಾತ್ರವೇನಿತ್ತು?

**ಲಕ್ಷ್ಮಿ :-** ದೇಶದ ಸ್ವಾತಂತ್ರ್ಯಕ್ಕೆ ಹೋರಾಡುವುದು ನಮ್ಮ ಮುಖ್ಯ ಧ್ಯೇಯವಾಗಿದ್ದರೂ, ಅದರ ಜೊತೆ ಜೊತೆಯಲ್ಲೇ ಮಹಿಳೆಯರ ಕಾಳಜಿಗಳಿಗೂ ಗಮನ ಕೊಡಲಾಗುತ್ತಿತ್ತು. ಸೇನೆಯಲ್ಲಿ ಮಹಿಳೆಯರು ಇರಬೇಕೇ ಬೇಡವೇ? ಎನ್ನುವ ವಾದ ಇತ್ತೀಚಿನದಾದರೂ ಮಹಿಳೆಯರದೇ ಆದ ಸೇನೆಯೊಂದನ್ನು ಕಟ್ಟಿದ ಕೀರ್ತಿ ಸುಭಾಷ್‌ಚಂದ್ರ ಬೋಸರದು. 'ನಿಮ್ಮದೇ ಹಕ್ಕುಗಳಿಗಾಗಿ ನಿಮ್ಮದೇ ಸ್ವಾತಂತ್ರ್ಯಕ್ಕಾಗಿ ಹೋರಾಡಿ' ಎಂದು ಅವರು ಹೇಳುತ್ತಿದ್ದರು. ರಾಣಿ ಝಾನ್ಸಿ ರೆಜಿಮೆಂಟ್‌ನ ನೇತೃತ್ವವನ್ನು ನನಗೆ ವಹಿಸಿದ್ದರು. ಸುಮಾರು ಒಂದು ಸಾವಿರ ಮಹಿಳೆಯರಿದ್ದ ಈ ರೆಜಿಮೆಂಟ್‌ನಲ್ಲಿ 200 ಮಂದಿ ನರ್ಸಿಂಗ್ ತರಬೇತಿಯನ್ನು ಮಾಡಿಕೊಂಡವರಾಗಿದ್ದರು. ಈ ಸೇನೆಯಲ್ಲಿ ಕೆಲಸ ಮಾಡುವುದೇ ಒಂದು ವಿಶೇಷ ಅನುಭವವಾಗಿತ್ತು. ಹೆಣ್ಣಿನ ಸಾಂಪ್ರದಾಯಿಕ ಪಾತ್ರದ ಮಾದರಿಯನ್ನೇ ಬದಲಾಯಿಸಿದ ಈ ಪಾತ್ರ ನಮಗೆ ವಿಶೇಷವಾಗಿತ್ತು.

**ಆಚಲ** :- ಅದು ಎಂತಹ ವರ್ಗದ ಮಹಿಳೆಯರು ಈ ಹೋರಾಟಗಳಲ್ಲಿ ಭಾಗಿಯಾಗುತ್ತಿದ್ದರು?

**ಲಕ್ಷ್ಮಿ** :- ವಿಶೇಷವಾಗಿ ಕೆಳವರ್ಗದ ಜನ. ಕೂಲಿಕಾರರು, ಕಾರ್ಮಿಕರು ಭಾಗವಹಿಸುತ್ತಿದ್ದರು.

**ಆಚಲ** :- ಇಂದು ಮಧ್ಯಮ ವರ್ಗಕ್ಕೆ ಸೇರಿದ ಮಹಿಳೆಯರ ಸಂಖ್ಯೆ ಹೆಚ್ಚಾಗಿದೆ. ಇವರುಗಳನ್ನು ಹೋರಾಟದ ಮುಖ್ಯ ವಾಹಿನಿಗೆ ತರುವುದು ಕಷ್ಟ. ಇಂದೂ ಮಹಿಳಾ ಹೋರಾಟದಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಿರುವ ನೀವು ಈ ಬಗ್ಗೆ ಏನು ಹೇಳುವಿರಿ!

**ಲಕ್ಷ್ಮಿ** :- ಹೌದು, ಇದೇನೋ ಗಂಭೀರ ಸಮಸ್ಯೆಯೇ. ಆದರೆ ಇವತ್ತು ದೇಶ ಎದುರಿಸುತ್ತಿರುವ ಗಂಭೀರ ಪರಿಸ್ಥಿತಿಯ ಕಾವು ಅವರಿಗೂ ತಟ್ಟುವುದಕ್ಕೆ ಹೆಚ್ಚೇನು ಸಮಯ ಹಿಡಿಯುವುದಿಲ್ಲ. ಈಗಾಗಲೇ ಅದು ತಟ್ಟಿದೆ ಕೂಡ. ಒಂದು ಕಾಲದಲ್ಲಿ, ಎಲ್.ಪಿ.ಸಿ. ಬ್ಯಾಂಕ್ ಮುಂತಾದ ಬಿಳಿ ಕಾಲರ್ ನೌಕರರು ಎಲ್ಲಿ ಚಳುವಳಿಯಲ್ಲಿ ಭಾಗವಹಿಸಿದ್ದರು? ಆದರೆ ದೇಶದ ಸ್ಥಿತಿಯ ಬಿಸಿ ಅವರನ್ನು ತಟ್ಟಿದೆ. ಅವರು ತಮ್ಮ ತಮ್ಮಲ್ಲೇ ಸಂಘಟಿತರಾಗಿ ಹೋರಾಟದಲ್ಲಿ ಭಾಗವಹಿಸುತ್ತಿದ್ದಾರೆ. ಅದೇ ರೀತಿ ಮಧ್ಯಮ ವರ್ಗದ ಮಹಿಳೆಯರು ನಮ್ಮ ನಡುವಿನ ಸಮಸ್ಯೆಗಳ ಬಿಸಿ ತಟ್ಟಿದಾಗ ಹೆಚ್ಚು ಸಂಖ್ಯೆಯಲ್ಲಿ ಬರಬಹುದು ಎನ್ನುವುದು ನನ್ನ ಆಶಾವಾದ.

**ಅಚಲ** :- ಕೊನೆಯದಾಗಿ ಒಂದು ಪ್ರಶ್ನೆ. ಈ ಸೌಂದರ್ಯ ಸ್ಪರ್ಧೆಯಂತಹ ಸಾಮಾಜಿಕ ಅನಿಷ್ಟಗಳ ವಿರುದ್ಧ ಪ್ರತಿಭಟಿಸಲು ಒಂದು ದೀರ್ಘ ಕಾಲದ ಕಾರ್ಯಕ್ರಮವನ್ನೇನಾದರೂ ಸೂಚಿಸುವಿರಾ?

**ಲಕ್ಷ್ಮಿ** :- ಇಂತಹದು ಮತ್ತೆ ಮತ್ತೆ ಬರಬಹುದು. ಬರತ್ತೆ. ಆದರೆ ಇಂತಹ ಅನಿಷ್ಟಗಳನ್ನು ಸಾಕಷ್ಟು ಮುಂಚೆಯೇ ಪ್ರತಿಭಟಿಸುವ ನಿರ್ಧಾರ ತೆಗೆದುಕೊಂಡು ವ್ಯಾಪಕವಾದ ರೀತಿಯಲ್ಲಿ ಸಂಘಟಿಸಬೇಕು. ಬೆಂಗಳೂರಿನಲ್ಲಿ ನೀವು ಮಾಡಿದ್ದು ಒಳ್ಳೆಯದಾಗಿದೆ. ವಿರೋಧಿಗಳನ್ನು ಬಗ್ಗು ಬಡಿಯಲು ನಮ್ಮ ಶಕ್ತಿ ಇನ್ನೂ ಹೆಚ್ಚಿಸಿಕೊಳ್ಳಬೇಕಿದೆ.

□

---

ಸ್ವಾತಂತ್ರ್ಯ ಸಂಗ್ರಾಮದಲ್ಲಿ ನೇತಾಜಿ ಸುಭಾಷ್ ಚಂದ್ರಬೋಸರ ನಿಕಟವರ್ತಿಯಾಗಿದ್ದ ಡಾ|| ಲಕ್ಷ್ಮಿ ಕ್ರಾಂತಿಕಾರಿಣಿ. ಎರಡನೇ ಮಹಾಯುದ್ಧದ ಸಂದರ್ಭದಲ್ಲಿ ಸುಭಾಷ್‌ಚಂದ್ರಬೋಸರು ಸಿಂಗಪುರದಲ್ಲಿ ಕಟ್ಟಿದ ಆಜಾದ್ ಹಿಂದ್ ಫೌಜ್‌ನಲ್ಲಿ ಮಹಿಳೆಯರಿಗೆ ಪ್ರತ್ಯೇಕವಾಗಿ ರೂಪಿಸಿದ ಝೂನ್ಸಿರಾಣಿ ರೆಜಿಮೆಂಟ್‌ನ ಕ್ಯಾಪ್ಟನ್ ಆಗಿ ನೇತಾಜಿಯವರಿಂದ ನೇಮಿಸಲ್ಪಟ್ಟ ಡಾ|| ಲಕ್ಷ್ಮಿ ಪೂರ್ವ ಏಷ್ಯಾದಲ್ಲಿನ ಭಾರತೀಯ ಮಹಿಳೆಯರ ಸಂಘಟನೆಯ ಹೊಣೆ ಹೊತ್ತವರು. ಲಕ್ಷ್ಮಿಯವರ ಹೋರಾಟದ ಸೆಲೆಗೆ ಕುಟುಂಬದ ಹಿನ್ನೆಲೆಯೂ ಮುಖ್ಯ ಕಾರಣ. ತಂದೆ ಸ್ವಾಮಿನಾಥನ್ ಬ್ಯಾರಿಸ್ಟರ್ ಆಗಿದ್ದರು. ತಾಯಿ ಅಮ್ಮು ಸ್ವಾಮಿನಾಥನ್ ಮದ್ರಾಸ್ ಕಾರ್ಪೊರೇಷನ್‌ನ ಕಾರ್ಪೊರೇಟರ್ ಆಗಿದ್ದರು. ಅಷ್ಟೇ ಅಲ್ಲ ಎರಡು ಬಾರಿ ಲೋಕ ಸಭಾ ಸದಸ್ಯೆಯಾಗಿಯೂ ಆಯ್ಕೆಯಾದವರು. ಪ್ರಸಿದ್ಧ ನೃತ್ಯಗಾರ್ತಿ ಮೃಣಾಲಿನಿ ಸಾರಾಭಾಯಿ ಇವರ ತಂಗಿ. ಇವರು ನೇತಾಜಿಯವರ ಮಿಲಿಟರಿ ಸೆಕ್ರೆಟರಿ ಕ್ಯಾಪ್ಟನ್ ಸೆಹಗಾಲ್‌ರವರನ್ನು 1947ರಲ್ಲಿ ವಿವಾಹವಾದರು. ಇವರ ಪುತ್ರಿ ಸುಭಾಷಿಣಿ ಆಲಿ ಮಾಜಿ ಲೋಕಸಭಾ ಸದಸ್ಯೆಯಾಗಿದ್ದು ಇದೀಗ ಅಖಿಲ ಭಾರತ ಪ್ರಜಾಸತ್ತಾತ್ಮಕ ಮಹಿಳಾ ಸಂಘಟನೆಯ ಸಹ ಕಾರ್ಯದರ್ಶಿಯಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಇಂದಿಗೂ ಬತ್ತದ ಹೋರಾಟದ ಚಿಲುಮೆಯಾದ ಲಕ್ಷ್ಮಿ ಪ್ರಸ್ತುತ ಅಖಿಲ ಭಾರತ ಪ್ರಜಾಸತ್ತಾತ್ಮಕ ಮಹಿಳಾ ಸಂಘಟನೆಯ ಉಪಾಧ್ಯಕ್ಷೆಯಾಗಿ ಕಾರ್ಯನಿರ್ವಹಿಸುತ್ತಿದ್ದಾರೆ.

# ಹೋರಾಟಗಾರ್ತಿಗೆ ಸಂದ ಜ್ಞಾನ ಪೀಠ

-ಅಚಲ

ಬಂಗಾಳಿ ಸಾಹಿತ್ಯ ಲೋಕಕ್ಕೆ ಐದನೆಯ ಜ್ಞಾನಪೀಠ ಪ್ರಶಸ್ತಿಯ ಕಿರೀಟ ತೊಡಿಸಿದ ಮಹಾಶ್ವೇತಾದೇವಿಯ ಬದುಕು ಬರಹಗಳೆರಡರಲ್ಲೂ ಹೋರಾಟವೇ ಉಸಿರು. ಸಾಮಾಜಿಕ ನ್ಯಾಯದ ಅನ್ವೇಷಣೆಯನ್ನೇ ತಮ್ಮ ಕೃತಿಗಳ ಮುಖ್ಯ ಕಾಳಜಿಯಾಗಿಸಿಕೊಂಡ ಬರಹಗಾರ್ತಿ ಮಹಾಶ್ವೇತಾ ದೇವಿ ತಮ್ಮ ವಾಸ್ತವ ಬದುಕಿನಲ್ಲೂ ದೀನ ದಲಿತರ, ಗುಡ್ಡ ಗಾಡು ಜನರ ಒಳಿತಿಗಾಗಿ ಹೋರಟದಲ್ಲಿ ತೊಡಗಿಕೊಂಡಿರುವವರು. 42 ಕಾದಂಬರಿಗಳು, 15 ಕಥಾ ಸಂಕಲನಗಳು, ಐದು ಮಕ್ಕಳ ಸಾಹಿತ್ಯ, ಒಂದು ನಾಟಕ ಸಂಕಲನ ಹೀಗೆ ವಿಶಾಲವಾಗಿ ಹರಡಿದೆ ಅವರ ಸಾಹಿತ್ಯ ಸೃಷ್ಟಿ.

ಚಿಕ್ಕಂದಿನಿಂದಲೂ ಮಹಾಶ್ವೇತೆಗೆ 'ಚರಿತ್ರೆ'ಯ ಅಧ್ಯಯನದಲ್ಲಿ ಅಪಾರ ಆಸಕ್ತಿ. ಭಾರತದ ಇತಿಹಾಸದಲ್ಲಿ ಮಿನುಗುತಾರೆಯಾದ ಝಾನ್ಸಿ ರಾಣಿ ಲಕ್ಷ್ಮೀಬಾಯಿಯ ದೇಶಪ್ರೇಮ. ಶೌರ್ಯ ಸಾಹಸಗಳು ಬಾಲಕಿ ಮಹಾಶ್ವೇತಾ ದೇವಿಯನ್ನು ಬಹಳವಾಗಿ ಆಕರ್ಷಿಸಿದ್ದವು. ವಿಶ್ವ ಭಾರತಿ ಮತ್ತು ಕಲ್ಕತ್ತಾ ವಿಶ್ವವಿದ್ಯಾನಿಲಯದಲ್ಲಿ ಅಧ್ಯಯನ ನಡೆಸಿ ಇಂಗ್ಲೀಷ್ ಸಾಹಿತ್ಯದ ಅಧ್ಯಾಪಕಿಯಾದ ಮಹಾಶ್ವೇತಾದೇವಿಯವರ ಮೊದಲ ಸಂಶೋಧನಾ ಕೃತಿ 1956 ರಲ್ಲಿ ಬರೆದ ರಾಣಿ ಲಕ್ಷ್ಮೀ ಬಾಯನ್ನು ಕುರಿತ ಗ್ರಂಥ. ಅವರ ಕೆಲವು ಮುಖ್ಯ ಕೃತಿಗಳು: 18ನೇ ಶತಮಾನದಲ್ಲಿ ಬಂಗಾಳದ ಮೇಲೆ ಮರಾಠರ ಆಕ್ರಮಣವನ್ನು ಕುರಿತ ಅಥರ್‌ಮಾಣಿಕ್, 1857ರ ಬ್ರಿಟೀಶ್ ಆಳ್ವಿಕೆಯ ಹಿನ್ನೆಲೆಯಲ್ಲಿ ರಚಿತವಾದ ಒಂದು ರೊಮ್ಯಾಂಟಿಕ್ ಕಾದಂಬರಿ ನಾಟಿ, ಸಂತಾಲ್ ಮತ್ತು ಮುಂಡಾ ಬುಡಕಟ್ಟು ಜನಾಂಗದ ದಂಗೆಯನ್ನು ಕುರಿತ ಅರಣ್ಯೇರ್ ಅಧಿಕಾರ್, ಗಂಡನ ದೌರ್ಜನ್ಯವನ್ನು ಮೌನವಾಗಿ ಪ್ರತಿಭಟಿಸಿದ ಗೃಹಿಣಿಯೊಬ್ಬಳ ವಸ್ತುವಾಧರಿಸಿದ ಸತಿ, ವಧು ದಹನದ ವಸ್ತುವನ್ನುಳ್ಳ ಸ್ವಾಹ ಅತ್ಯಾಚಾರ ಮತ್ತು ಪ್ರತಿಭಟನೆಯನ್ನು ವಸ್ತುವನ್ನಾಗಿರಿಸಿಕೊಂಡಿರುವ ಸಂಪ್ರತಿಕ್, ದಕ್ಷಿಣ ಬಿಹಾರ್ ನಲ್ಲಿರುವ ಜೀತ ಪದ್ಧತಿಯನ್ನು ಕುರಿತ ವಸ್ತುವುಳ್ಳ ಕ್ಷುಧಾ ಮುಂತಾದವು. ನಕ್ಸಲೀಯ ಚಳುವಳಿಯಲ್ಲಿ ಮಡಿದವರ ನೋವು, ಸಾಹಸಗಳಿಗೆ, ಪ್ರಾಣತತ್ತ ಗುಡ್ಡಗಾಡು ಜನಗಳ ಗೋಳಿನ ಕಥೆಗಳಿಗೆ, ಅಧಿಕಾರಸ್ಥ ಮತ್ತು ಹಣವಂತರ ದುರಾಸೆಗೆ ಬಲಿಯಾಗುವ ಹೆಣ್ಣಿನ ಅಳಲಿನ ಕಥೆಗಳಿಗೆ ತಮ್ಮ ಕೃತಿಗಳಲ್ಲಿ ಆಪ್ತವಾಗಿ ಮಿಡಿದವರು ಮಹಾಶ್ವೇತಾದೇವಿ. 'ಹಜಾರ್ ಚುರಾಶೀರ್ ಮಾ, ಅಗ್ನಿಗರ್ಭ, ಚೊಟ್ಟಿ ಮುಂಡಾ ಈ ಕೃತಿಗಳು ಅವರ ಅಂತಃಕರಣದ ನೆಲೆಗಳನ್ನು ಪರಿಚಯಿಸುತ್ತದೆ.

ಮಹಾಶ್ವೇತಾದೇವಿ ತಮ್ಮ ಬರಹದಲ್ಲಿ ತೋರುವ ಸಾಮಾಜಿಕ ಕಳಕಳಿಗೆ ಕ್ರಿಯಾತ್ಮಕ ಅಭಿವ್ಯಕ್ತಿಯನ್ನೂ ಕೊಟ್ಟವರು. ಪಶ್ಚಿಮ ಬಂಗ ಖೇಡಿಯ ಶೋಬರ್ ಸಮಿತಿಯ ಕಾರ್ಯಾಧ್ಯಕ್ಷರಾಗಿ ಕೆಲಸ ಮಾಡುತ್ತಿರುವ ಮಹಾಶ್ವೇತಾದೇವಿ ಮೇಧಿನಿಪುರದ ಲೋಧಾ ಮತ್ತು ಪುರೂಲಿಯಾದ ಖೇಡಿಯ ಶೊಬರ್ ಬುಡಕಟ್ಟು ಜನರೊಂದಿಗೆ ಅವರ ಕಷ್ಟ ನಷ್ಟಗಳಲ್ಲಿ ಭಾಗಿಯಾಗಿ ಅವರ ಸಾಮಾಜಿಕ, ಆರ್ಥಿಕ ಮತ್ತು ನಾಗರಿಕ ಹಕ್ಕುಗಳ ಹೋರಾಟದಲ್ಲಿ ನೇತೃತ್ವ ವಹಿಸುತ್ತಿದ್ದಾರೆ. ಇವರ ಮಧ್ಯಸ್ಥಿಕೆಯಿಂದಾಗಿ ಸೆರೆಮನೆಯಲ್ಲಿರುವ ಖೈದಿಗಳು ಹುಚ್ಚರು, ನಕ್ಸಲೀಯರು - ಮುಂತಾದವರನ್ನು ಇತ್ತೀಚೆಗೆ ಪಶ್ಚಿಮ ಬಂಗಾಳ ಸರ್ಕಾರವು ಬಿಡುಗಡೆ ಮಾಡಿತು. ಪಶ್ಚಿಮ ಬಂಗಾಳದ ಕಾನೂನು ಸಲಹಾ ಮಂಡಳಿಯ ಬಹುಮುಖ್ಯ ಸದಸ್ಯೆಯಾಗಿ ಇವರು ಕೆಲಸ ಮಾಡುತ್ತಿದ್ದಾರೆ.

ಯಾವ ಎಡಪಕ್ಷಗಳ ಸದಸ್ಯೆಯಾಗದಿದ್ದರೂ ಮಹಾಶ್ವೇತಾದೇವಿ ಮಾರ್ಕ್ಸ್‌ವಾದದಲ್ಲಿ ನಂಬಿಕೆಯಿಟ್ಟವರು. ಅವರು ಬದುಕು ಮತ್ತು ಬರಹವೆರಡರ ಮೇಲೂ ಅಪಾರ ಪ್ರಭಾವ ಬೀರಿರುವ ಮಾರ್ಕ್ಸ್‌ವಾದದ ಬಗೆಗಿನ ಅವರ ಶ್ರದ್ಧೆ ಇತ್ತೀಚಿನ ಸೋವಿಯತ್ ಪತನದ ನಂತರವೂ ಎಳ್ಳಷ್ಟು ಕಡಿಮೆಯಾಗಿಲ್ಲ.

ಗುಡ್ಡಗಾಡು ಜನರಿಗಾಗಿ ಇವರು ಮಾಡಿರುವ ಸಮಾಜ ಸೇವಾಕಾರ್ಯವನ್ನು ಗೌರವಿಸಿ 1986ರಲ್ಲಿ ಭಾರತ ಸರ್ಕಾರವು ಇವರಿಗೆ 'ಪದ್ಮಶ್ರೀ' ಪ್ರಶಸ್ತಿಯನ್ನು ನೀಡಿದೆ. 1976ರಲ್ಲಿ ಇವರ 'ಅರಣ್ಯೇರ್ ಅಧಿಕಾರ್' ಕಾದಂಬರಿಗೆ ಸಾಹಿತ್ಯ ಅಕಾಡೆಮಿ ಪ್ರಶಸ್ತಿಯಲ್ಲದೆ ಶರಶ್ಚಂದ್ರ ಸ್ಮಾರಕ ಬಹುಮಾನ, ಅಮೃತ್ ಪುರಸ್ಕಾರ, ಕಲ್ಕತ್ತಾ ವಿಶ್ವವಿದ್ಯಾಲಯದ ಭುವನ ಮೋಹಿನಿ ಮತ್ತು ಜಗತಾರಿಣಿ ಪದಕಗಳ ಗೌರವವೂ ಇವರಿಗೆ ಸಂದಿದೆ. ಅವರ ಹಲವಾರು ಕೃತಿಗಳು ಒರಿಯ, ಹಿಂದಿ ಅಸ್ಸಾಮಿ, ತೆಲುಗು, ಮಲಯಾಳಂ, ಕನ್ನಡ, ಮರಾಠಿ, ಗುಜರಾತಿ, ಇಂಗ್ಲೀಷ್, ಜಪಾನಿ, ಇಟಾಲಿಯನ್ ಭಾಷೆಗಳಿಗೆ ಅನುವಾದವಾಗಿವೆ.

1992ರಲ್ಲಿ ಅವರು ಬೆಂಗಳೂರಿಗೆ ಸಾಹಿತ್ಯ ಅಕಾಡೆಮಿಯ ಕಾರ್ಯಕ್ರಮಕ್ಕೆ ಅತಿಥಿಯಾಗಿ ಬಂದಿದ್ದಾಗ ಅಚಲ ಸಂಪಾದಕ ಬಳಗದೊಂದಿಗೆ ಬಹಳ ದೀರ್ಘವಾಗಿ ತಮ್ಮ ಬದುಕು-ಬರಹಗಳ ಬಗೆಗಿನ ವಿಚಾರಗಳನ್ನು ಹಂಚಿಕೊಂಡಿದ್ದರು. ಅಚಲ ಜುಲೈ ಸಂಚಿಕೆಯಲ್ಲಿ ಅಚಲವು ಮಹಾಶ್ವೇತಾದೇವಿಯವರೊಂದಿಗೆ ನಡೆಸಿದ ದೀರ್ಘ ಸಂದರ್ಶನದ ಲೇಖನವೂ ಪ್ರಕಟವಾಗಿತ್ತು.

## ಪತ್ರಿಕೆಗಳೇ ದೌರ್ಜನ್ಯ ತೋರಿದಾಗ...

ಸುಂದರವಾಗಿರುವವರೆಲ್ಲ ಸೌಂದರ್ಯಸ್ಪರ್ಧೆಯನ್ನು ಸಂತೋಷದಿಂದ ಸ್ವಾಗತಿಸುತ್ತಾರೆ. ಆದರ ಬಗ್ಗೆ ಅಸಮಾಧಾನ ವ್ಯಕ್ತಪಡಿಸುವವರು ಕುರೂಪಿಗಳು ಮಾತ್ರ ಎನ್ನುವುದು ಕರ್ನಾಟಕದ ಮುಖ್ಯ ಮಂತ್ರಿ ಜೆ.ಹೆಚ್. ಪಟೇಲರು ಉದುರಿಸಿದ ಅಣಿಮುತ್ತು.

ಆದರೆ ಹಲವಾರು ಪತ್ರಿಕೆಗಳು ಈ ಬಗ್ಗೆ ತೋರಿದ ಧೋರಣೆ ಪಟೇಲರದಕ್ಕಿಂತ ಭಿನ್ನವೇನೂ ಆಗಿರಲಿಲ್ಲ "ಸೌಂದರ್ಯ ಸ್ಪರ್ಧೆಯನ್ನು ಪ್ರತಿಭಟಿಸುತ್ತಿರುವ ಸ್ತ್ರೀಯರು ಸ್ಥಳೀಯ ನೆಲೆಯಲ್ಲಿ ನಡೆಯುವ ಇಂತ ಸ್ಪರ್ಧೆಯ ಕೇವಲ ಮೊದಲ ಸುತ್ತಿನಲ್ಲಿ ಕೂಡ ಸಲ್ಲದಂಥ ಮಾದರಿಗಳೇ ಆಗಿರುವುದಕ್ಕೆ ಏನು ಕಾರಣ? ವಿಶ್ವಸುಂದರಿಗೆ ತೆರೆಯುವ ಅಲೀಬಾಬಾನ ಗುಹೆ ಹಾಗಿರಲಿ, 'ಮಿಸ್ ಸುಂದರ ತುಟಿ'ಗೆ 'ಮಿಸ್ ಸುಂದರ ಕೂದಲಿ'ಗೆ ನೀಡಲಾಗುವ ಬೃಹತ್ ಪ್ರಮಾಣದ ಬಹುಮಾನಗಳನ್ನು ಗೆಲ್ಲುವ ಸಾಧ್ಯತೆಯ ನೆರಳೂ ಇಂಥವರನ್ನು ಹಾಯಲಾರದು. ಇಂಥವರು ಮಹಿಳೆಯರನ್ನು ಸರಕಾಗಿಸುವುದರ ವಿರುದ್ಧ ಪ್ರತಿಭಟಿಸುತ್ತಿರುವುದಕ್ಕೂ ಈ ಮೇಲಿನ ಅಂಶಕ್ಕೂ ಸಂಬಂಧವಿರಲಾರದೆ?'' ಎಂದು ಒಬ್ಬ ವಿಖ್ಯಾತ ಅಂಕಣಗಾರನ ಒಕ್ಕಣೆ!

ಸೌಂದರ್ಯ ಸ್ಪರ್ಧೆಯ ಪರವಾಗಿ ವಾದಿಸುವವರು ಬಳಸಿದ ಭಾಷೆಯಲ್ಲಿ ಅವರು ನೇರವಾಗಿ ಹೇಳದಿದ್ದರೂ ಪ್ರತಿಭಟನಾಕಾರರು ಕುರೂಪಿಗಳು, ಅಸೂಯಾಪರರಾದ ಹೆಂಗಸರ ಗುಂಪು ಎಂಬ ಧ್ವನಿ ಸ್ವತಃ ಸ್ಪಷ್ಟ. ಸೌಂದರ್ಯದಿಂದ ಇತರರ ಗಮನ ಸೆಳೆಯಲಾಗದ ಇವರು ಪ್ರತಿಭಟಿಸಿ ಇತರರ ಗಮನ ತಮ್ಮ ಕಡೆ ಹರಿಯುವಂತೆ ಮಾಡುತ್ತಿದ್ದಾರೆಂದು ಅವರ ನುಡಿಗಳು ಸೂಚಿಸುತ್ತವೆ. ಉದಾಹರಣೆಗೆ ಸೌಂದರ್ಯ ಸ್ಪರ್ಧೆ ವಿರೋಧಿಗಳನ್ನು 'ಕಿರಿಚುವ ಕೆಸಾಂಡ್ರಾಗಳು', 'ಬಾಯಿಯಲ್ಲಿ ಬುಸುಗುಡುವವರು, ಗುಡುಗುವವರು' 'ಗಂಟಲು ಕರ್ಕಶವಾಗುವವರೆಗೆ ಅರಚುವವರು' ಎಂದೂ, ಎ.ಬಿ.ಸಿ.ಎಲ್. ಸಂಸ್ಥೆಯ 'ಮುದ್ದಿನ ಬೇಬಿ' ಸೌಂದರ್ಯ ಸ್ಪರ್ಧೆ ಎಂದೂ ಪತ್ರಕರ್ತರುಗಳು ಬರೆದರು. ಅಂದರೆ ಪ್ರತಿಭಟನಾಕಾರ ಸ್ತ್ರೀಯರಿಗೆ ನಯ ನಾಜೂಕೇನೂ ಗೊತ್ತಿಲ್ಲ ಎಂಬಂಥ ಚಿತ್ರಣ ಇದು. ಹೆಂಗಸರು ಸ್ವಭಾವದಿಂದಲೇ ಅಸೂಯಾಪರರು, ಹೆಣ್ಣಿಗೆ ಹೆಣ್ಣೇ ಶತ್ರು, ಎಂಬಂಥ ಪರಾಪರಾಗತ ವಿಚಾರಗಳನ್ನು ಬಲಪಡಿಸುವುದಕ್ಕೆ ಇವರ ಭಾಷೆ ಕಟಿಬದ್ಧವಾಗಿರುವಂಥದು. ಸುಂದರಿಯರೆಲ್ಲ 'ಸಿಂಡ್ರೆಲಾ'ಗಳೂ, ಪ್ರತಿಭಟನೆ ಮಾಡುವ ಮಹಿಳೆಯರು ಆಕೆಯ ಕುರೂಪಿ ಸೋದರಿಯರು ಎಂಬಂತೆ ಸಿದ್ಧ ಮಾದರಿಗಳೇ ಇವರಿಗೆ ದೊಡ್ಡ ಅಸ್ತ್ರ.

ಹೀಗೆ ವ್ಯಂಗ್ಯವಾಗಿ ಚಿತ್ರಿಸಿ ಈ ಪತ್ರಕರ್ತರು ಸಾಧಿಸಿದ್ದೇನು? ನವೋಮಿ ವೂಲ್ಫ್ ಎಂಬ ಸ್ತ್ರೀವಾದಿ ಹೇಳುವಂತೆ "ತಮ್ಮ ವೈಯಕ್ತಿಕ ಆಸ್ಮಿತೆಗೆ ಅನುಗುಣವಾಗಿ ಸಾರ್ವಜನಿಕ ಕಾರ್ಯಾಚರಣೆಯಲ್ಲಿ ತೊಡಗಿದ್ದಕ್ಕಾಗಿ ಹೆಂಗಸರನ್ನು ಶಿಕ್ಷಿಸುವುದೇ'' ಇದರ ಹಿಂದಿದ್ದ ಉದ್ದೇಶ.

ಪ್ರಜ್ಞಾವಂತ ರಾಜಕೀಯ ಚಳವಳಿಯೊಂದನ್ನು ಕುರೂಪಿ ಹೆಣ್ಣುಗಳು ಸುಂದರಿಯರ ಮತ್ತು ಸೌಂದರ್ಯದ ವಿರುದ್ಧ ಅಸೂಯೆಯಿಂದ ಹೂಡಿದ ವಿರೋಧವೆಂದು ಪ್ರತಿಪಾದಿಸುವುದರ ಮೂಲಕ ಸಮಾಜದ ಸ್ತ್ರೀ ಸಮುದಾಯದ ಒಂದು ದೊಡ್ಡ ಭಾಗ, ಈ ಪ್ರತಿಭಟನೆಯಿಂದ ದೂರವಿರುವಂತೆ ಮಾಡಲು, ಈ ಪತ್ರಿಕೆಗಳು ದುಡಿದವು. ಕಾಲೇಜು, ವಿದ್ಯಾರ್ಥಿಯರು ಇದರಿಂದ ಆಕರ್ಷಿತರಾಗಲಿಲ್ಲ ಎಂಬುದು ಗಮನಾರ್ಹ.

## ರಾಜಕೀಯ ಅಪಮೌಲ್ಯೀಕರಣ

ಸೌಂದರ್ಯ ಸ್ಪರ್ಧೆ ವಿರೋಧಿ ಪ್ರತಿಭಟನೆಯನ್ನು ಬಹಳಷ್ಟು ವಿಧಗಳಿಂದ ಸಮೂಹಮಾಧ್ಯಮಗಳು 'ಭಾರತೀಯ ಸಂಸ್ಕೃತಿ ರಕ್ಷಕ'ರ ಹುಚ್ಚು ಭಾವೇವೇಶದಿಂದ ಹುಟ್ಟಿದ್ದೆಂದು ಬಣ್ಣ ಕೊಟ್ಟು ಪ್ರಚಾರ ಮಾಡಿದವು. ಸ್ತ್ರೀ= ಕುರೂಪಿ ಎಂಬುದು ವೈಯಕ್ತಿಕವಾದ ಹೆಣ್ಣಿನ ತನ್ನತನದ ಪ್ರತೀಕದ ಮೇಲೆ ಮಾಡಿದ ಪ್ರಹಾರವಾಗಿತ್ತು. ಆದರೆ 'ಭಾರತೀಯ ಸಂಸ್ಕೃತಿಯನ್ನು ಮಲಿನಗೊಳಿಸುವುದನ್ನು ತಪ್ಪಿಸುವ' ಉದ್ದೇಶದ್ದೆಂದು ಸಾರುವುದು ಪ್ರತಿಭಟನೆಯನ್ನು ರಾಜಕೀಯ ಸ್ತರದಲ್ಲಿ ಪ್ರಹರಿಸುವ ಹುನ್ನಾರವಾಗಿತ್ತು. ಸಂಘ ಪರಿವಾರ ಗುಂಪುಗಳು ತಳೆದ ಘೋಷಣೆಗಳನ್ನಷ್ಟೇ ಉಲ್ಲೇಖಿಸಿ, ಅಪಹಾಸ್ಯ ಮಾಡಿ, ಗೇಲಿ ಮಾಡುವುದರಲ್ಲಿ ಪತ್ರಿಕೆಗಳು ಅಪಾರ ಆಸಕ್ತಿ ತಳೆದವು. ಪ್ರತಿಭಟನಾಕಾರರಲ್ಲಿ ವಿವಿಧ ತಾತ್ವಿಕ ಪಂಥಗಳ ಹಲವು ಬಗೆಯ ಸ್ತ್ರೀವಾದಿ ಸಂಘಟನೆಗಳು ಪಾಲ್ಗೊಂಡಿದ್ದರೂ, ಅವೆಲ್ಲಕ್ಕೂ ಏಕಾಕಾರ ಒಂದೇ ಬಣ್ಣ ನೀಡಲಾಯಿತು. ಕೆಳಜಾತಿ, ಕೆಳವರ್ಗಗಳ ಮಹಿಳೆಯರ ಮೇಲಿನ ದೌರ್ಜನ್ಯ, ಮಾನವ ಹಕ್ಕುಗಳ ಉಲ್ಲಂಘನೆ ಮುಂತಾದವುಗಳ ವಿರುದ್ಧ ದೃಢವಾದ ತತ್ವ ನಿಷ್ಠೆಯಿಂದ ಹೋರಾಡುತ್ತಿರುವ ಹಲವಾರು ಮಹಿಳಾ ಸಂಘಟನೆಗಳ ಪ್ರತಿಭಟನೆಗಳು ಸೌಂದರ್ಯಸ್ಪರ್ಧೆ ವಿರೋಧಿ ಪ್ರತಿಭಟನೆಯ ಮಾದರಿಯಲ್ಲಿ ಪತ್ರಿಕೆಗಳ ಗಮನ ಸೆಳೆಯಲಿಲ್ಲ ನಿಜ. ಆದರೆ ಅವುಗಳ ತಾತ್ವಿಕ ತಳಹದಿ ಪೊಳ್ಳಾದದ್ದಲ್ಲ ಎಂಬುದನ್ನು ಗುರುತಿಸುವ ಯಾವ ಯತ್ನವೂ ನಡೆಯದಿದ್ದುದು ದುರಂತ.

'ಮಹಿಳಾ ಜಾಗೃತಿ' ಎಂಬ ಸಂಘಟನೆಯೊಂದು ಗೋದ್ರೇಜ್ ಷೋರೂಂನಲ್ಲಿ ರೆಫ್ರಿಜಿರೇಟರ್‌ಗಳಿಗೆ ಸಗಣಿ ಬಳಿದದ್ದು ಕೇವಲ ಸಾಂಕೇತಿಕ ಪ್ರತಿಭಟನೆಯಾಗಿದ್ದರೂ ಅದನ್ನು ಸಂಸ್ಕೃತಿಯ ಪಾವಿತ್ರ್ಯ ರಕ್ಷಿಸುವ ಗುಂಪಿನ ಕೆಲಸವೆಂದೇ ಜನ ಭಾವಿಸುವ ಮಾದರಿಯಲ್ಲಿ

ಪತ್ರಿಕೆಗಳು ಬಣ್ಣಿಸಿದವು. ಅಹಮದಾಬಾದ್‌ನಲ್ಲಿ ಎಫ್.ಎಂ. ಹುಸೇನರ ಚಿತ್ರಗಳನ್ನು ಸುಟ್ಟದ್ದು, ಬೆಂಗಳೂರಿನಲ್ಲಿ ಕಂಪ್ಯೂಟರ್‌ಗಳನ್ನು ಚಚ್ಚಿ ಹಾಕಿದ್ದು, ಮುಂಬಯಿಯಲ್ಲಿ ಮೈಕಲ್ ಜಾಕ್ಸನ್‌ನ ವಿರುದ್ಧ ನಡೆದ ಪ್ರತಿಭಟನೆ ಮತ್ತು ರೆಫ್ರಿಜರೇಟರಿಗೆ ಸೆಗಣಿ ಬಳಿದ ಘಟನೆ ಎಲ್ಲವೂ 'ಹಿಂದೂ ಸಂಸ್ಕೃತಿ ರಕ್ಷಣೆ' ಹೆಸರಿನಲ್ಲಿ ಇತ್ತೀಚೆಗೆ ನಡೆಯುತ್ತಿರುವ ಕ್ರಿಯಾ ಸರಪಳಿಗಳು ಎಂದು ಒಬ್ಬ ಪ್ರಸಿದ್ಧ ಅಂಕಣಕಾರರು ಬರೆದರು. ಈ ಪ್ರತಿಭಟನೆಗಳ ವ್ಯತ್ಯಾಸವಾಗಲಿ, ಅವುಗಳ ಹಿಂದಿನ ಉದ್ದೇಶಗಳು ಬೇರೆ ಬೇರೆ ಎಂಬುದನ್ನಾಗಲಿ ಅವರಿಗೆ ಕಾಣಲಾಗಲಿಲ್ಲ. ಒಬ್ಬ ಅನುಭವಸ್ಥ ಪತ್ರಕರ್ತನಿಗೆ 'ಮಹಿಳಾ ಜಾಗೃತಿ'ಯೂ 'ಮಹಿಳಾ ಜಾಗರಣ'ವೂ ಒಂದೇ ಸಂಘಟನೆ ಅಲ್ಲ ಎಂಬುದನ್ನೂ ಗ್ರಹಿಸಲಾಗಲಿಲ್ಲ. ಕೇವಲ ಹೆಸರಿನ ಹೋಲಿಕೆಗೆ ಆತ ಹೀಗೆ ಸುಲಭವಾಗಿ ಬಲಿಯಾಗಲು ಸಾಧ್ಯ ಎಂಬುದು ನಂಬಲಿಕ್ಕಾಗದಿದ್ದರೂ ನಿಜವಾಗಿದೆ!

ಇಂಥ ತಪ್ಪು ಕಲ್ಪನೆಯನ್ನು ಹೆಚ್ಚಿಸುವಲ್ಲಿ ರೈತಸಂಘದ ನಾಯಕ ಎಂ.ಡಿ. ನಂಜುಂಡ ಸ್ವಾಮಿಯಂಥವರ ಹೇಳಿಕೆಯೂ ಸಾಕಷ್ಟು ನೆರವಾಯಿತು. ಉಮಾಭಾರತಿಯವರೊಂದಿಗೆ ಒಂದೇ ವೇದಿಕೆಯಲ್ಲಿ ಪಾಲು ಪಡೆದು 'ತನ್ನ ತತ್ವಕ್ಕಾಗಿ ಸೈತಾನನೊಂದಿಗೂ ಕೈಜೋಡಿಸಲು ತಾನು ಸಿದ್ಧ' ಎಂದು ಆತ ಹೇಳಿಕೆ ನೀಡಿದ್ದರ ಹಿಂದೆ ಪೂರ್ವಾಪರ ವಿವೇಚನೆಯೇನೂ ಇಲ್ಲವಾಗಿದ್ದು, ಪ್ರತಿಭಟನಾಕಾರಿ ಗುಂಪುಗಳನ್ನೆಲ್ಲ ಒಂದೇ ಬಣ್ಣದಿಂದ ಕಾಣುವುದನ್ನೇ ಅದು ಬೆಂಬಲಿಸುವಂತಿದ್ದದು ವಿಷಾದಕರ ಸಂಗತಿ.

**ಪ್ರತಿಭಟನೆಯ ಚರಿತ್ರೆ**

- ವಿಶ್ವ ಸುಂದರಿ ಸ್ಪರ್ಧೆಯ ವಿರುದ್ಧವಾದ ಮೊಟ್ಟಮೊದಲ ಪ್ರತಿಭಟನೆ- 1968ರಷ್ಟು ಹಿಂದೆಯೇ ಲಂಡನ್‌ನ ಅಲ್ಬರ್ಟ್‌ಹಾಲ್‌ನಲ್ಲಿ ನಡೆದಿತ್ತು. ಸೌಂದರ್ಯದ ಮಿಥ್ಯಾ ಮಾದರಿಗಳನ್ನು ಹೇರುವುದರಿಂದ ಎಲ್ಲಾ ಮಹಿಳೆಯರನ್ನೂ ತಮ್ಮ ದೇಹಗಳನ್ನು ಪರಕೀಯವೂ ಅನಾನುಕೂಲಕರವೂ ಆದ ಆಕಾರಗಳೊಳಕ್ಕೆ ಹಿಗ್ಗಿಸಿ-ಕುಗ್ಗಿಸಿಕೊಳ್ಳಲು ಒತ್ತಾಯಿಸುತ್ತಿರುವುದು ಕೇವಲ ಪುರುಷರ ಸಂತೋಷಕ್ಕಾಗಿ' ಎಂಬ ತಾತ್ವಿಕ ಕಾರಣದಿಂದ ಆ ಪ್ರತಿಭಟನೆ ನಡೆದಿತ್ತು.
- 1970ರ ನವೆಂಬರ್‌ನಲ್ಲಿ ನೂರಾರು ಮಹಿಳೆಯರು ವಿಶ್ವಸುಂದರಿ ಸ್ಪರ್ಧೆಯನ್ನು ವಿರೋಧಿಸಿ, ವೇದಿಕೆಯತ್ತ ಧಾವಿಸಿ, ಕರಪತ್ರಗಳನ್ನೂ, ಬಿಳಿಯ ಪ್ಲಾಸ್ಟಿಕ್ ಇಲಿಗಳನ್ನು ಎಸೆಯುವ ಮೂಲಕ ಆ ಸ್ಪರ್ಧೆಗೆ ತಡೆಯೊಡ್ಡಿ ಪ್ರತಿಭಟಿಸಿದ್ದರು. ಅದರ ಬಗ್ಗೆ ಅಂದಿನ ಪತ್ರಿಕೆಗಳು ಬಹಳ ಖುಷಿಯಿಂದ 'ಭಯಂಕರ ಆಯುಧಗಳು!' ಎಂದು ಬರೆದು ಗೇಲಿ ಮಾಡಿದವು.
- ಸೌಂದರ್ಯದ ಸೀಮಿತ ವ್ಯಾಖ್ಯಾನಗಳೆಂದು Corset, ಬ್ರಾಗಳನ್ನು ಮುಂದೆ 'ಸ್ವಾತಂತ್ರ್ಯ ಕಸದ ಬಕೆಟ್' ಒಳಕ್ಕೆ ತುಂಬಲಾಯಿತು. ಅದಕ್ಕೆ ಪತ್ರಿಕೆಗಳು ತಮ್ಮ ಕಲ್ಪನೆಯ ಬೆಂಕಿಹೊತ್ತಿಸಿ 'ಬ್ರಾ ಸುಡುವ' ಕ್ಷುಲ್ಲಕ ಕಾರ್ಯಾಚರಣೆಯೆಂದು ಸಮೀಕರಿಸಿ ಬರೆದವು.
- ಸೌಂದರ್ಯ ಸ್ಪರ್ಧೆಯ ವಿರೋಧವು ಸಕ್ರಮವಾಗಿಲ್ಲದಿರಬಹುದು. ಆದರೆ ಅದು ನಿಲ್ಲದೆ ನಡೆದು ಬರುತ್ತಲೇ ಇದೆ. 1994ರಲ್ಲಿ ಕೂಡ ಫಿಲಿಪ್ಪೀನ್ಸ್‌ನಲ್ಲಿ ಬ್ಯಾನರ್‌ಗಳ ಮೂಲಕ ಅದನ್ನು ವಿರೋಧಿಸಿದ್ದರು.
- ಎ.ಬಿ.ಸಿ.ಎಲ್. ಅಥವಾ ಅದರಂಥ ಪ್ರಾಯೋಜಕ ಸಂಸ್ಥೆಗಳು, ಇಂಥ ಪ್ರತಿಭಟನೆಯನ್ನು ಅರ್ಥಹೀನ, ದುರ್ಬಲ ಮತ್ತು ಸ್ಥಳೀಯ ಎಂದು ನಂಬಬಹುದು. ಅಥವಾ ಎಲ್ಲರೂ ಹಾಗೆ ನಂಬಲೆಂದು ಬಯಸಲೂಬಹುದು. ಆದರೆ ಅಭಿವೃದ್ಧಿ ಶೀಲರಾಷ್ಟ್ರಗಳು ತಮ್ಮ ಪ್ರಗತಿಗಾಗಿ ತೆರೆದಿರುವ ಅವಕಾಶ ಇದೆಂದೂ, ಅದನ್ನು ಪಡೆದುಕೊಳ್ಳಲು ನೂಕು ನುಗ್ಗಲು ನಡೆದಿದ್ದಾಗ, ಭಾರತವು ಅದಕ್ಕಾಗಿ ಆಯ್ಕೆಯಾದದ್ದು ನಮ್ಮ ಅದೃಷ್ಟ ಎಂಬುದು ಎ.ಬಿ.ಸಿ.ಎಲ್.ನ ಜನರಲ್ ಮ್ಯಾನೇಜರ್ ಮನೋಹರ್ ಅರ್ಕಾಟ್ ಉದುರಿಸಿದ್ದು ನುಡಿಮುತ್ತು. ಅಂದರೆ 'ಭಿಕ್ಷುಕ ದೇಶ'ಗಳಿಗೆ ಇಂಥ ಆಯ್ಕೆ ಅಸಾಧ್ಯವೆಂಬುದೇ ಅವರ ಮಾತಿನ ಅರ್ಥ.

ಆದರೆ ಪಶ್ಚಿಮ ರಾಷ್ಟ್ರಗಳು ತಾವು ತಿರಸ್ಕರಿಸಿದ ಎಲ್ಲ ಪದಾರ್ಥಗಳು, ಕಸವನ್ನೂ ಹೊರಹಾಕಲು ಅಭಿವೃದ್ಧಿಶೀಲದೇಶಗಳನ್ನು ಆರಿಸಿಕೊಳ್ಳುವಂತೆಯೇ ಈಗ ಸೌಂದರ್ಯ ಸ್ಪರ್ಧೆಗಾಗಿ ಆರಿಸಿಕೊಳ್ಳುತ್ತಿವೆ ಅಷ್ಟೆ!

ನಮ್ಮ ರಾಜ್ಯದ ನಾಯಕ ಶಿಖಾಮಣಿಗಳು ಈ ಸ್ಪರ್ಧೆಯಿಂದ ರಾಜ್ಯಕ್ಕೆ ಎಷ್ಟೆಷ್ಟೋ ಸವಲತ್ತುಗಳು ದೊರೆಯುತ್ತವೆಂದು ಕನಸಿಸಿದ್ದು ಈಗ ಹುಸಿಯಾಗಿದ್ದು, ಅವರ ಕುರುಡುಗಣ್ಣಿಗೆ ಕನ್ನಡಿ ಹಿಡಿದಿಲ್ಲವೆ?

*(ಆಧಾರ : ಡೆಕನ್ ಹೆರಾಲ್ಡ್: 17, ನವೆಂಬರ್, 1996)* □

**ಮುಖ್ಯ ಮಂತ್ರಿಗಳ ಉವಾಚ :**

'ಯಾರು ಸುಂದರರೋ ಅವರು
ಸೌಂದರ್ಯ ಸ್ಪರ್ಧೆ ಸ್ವಾಗತಿಸುತ್ತಾರೆ'
ಇದಕ್ಕೆ ನಮ್ಮ ಉತ್ತರ
ಯಾರು ಪ್ರಜ್ಞಾವಂತರೋ ಅವರು
ಇದನ್ನು ವಿರೋಧಿಸುತ್ತಾರೆ.

- ಶಾಂತಾ ನಾಗರಾಜ್

# ಪ್ರವಾಹ ಇಳಿದ ಮೇಲೆ

ಇದು ಬರೀ 'ದೇಹ ಪ್ರದರ್ಶನದ ಸೌಂದರ್ಯ'ವಲ್ಲ 'ಧ್ಯೇಯೋದ್ದೇಶದ ಸೌಂದರ್ಯ' ಎಂದು 'ವಿಶ್ವಸುಂದರಿ ಸಂಘಟನೆ' ಸಾರಿದ್ದೂ ಸಾರಿದ್ದೆ. ಅದನ್ನೇ ಎಲ್ಲಾ ವೇದಿಕೆಯಲ್ಲೂ ಮಾಜಿ ಸುಂದರಿಯರು, ಹಾಜಿ ಸುಂದರಿಯರು, ಸೌಂದರ್ಯ ಸ್ಪರ್ಧೆಯನ್ನು ಬೆಂಬಲಿಸಿಯೇ ಸುಂದರರಾದೆವೆಂದುಕೊಂಡವರು ಬಾಯಿ ಪಾಠ ಒಪ್ಪಿಸಿದರು. ಎ.ಬಿ.ಸಿ.ಎಲ್. ಅಂಥಾ ಯಾವ ಮುಲಾಜಿಲ್ಲದೆ 'ಇದು ಮೂಲತಃ ವ್ಯಾಪಾರಿ ಚಟುವಟಿಕೆ, ಕಾರ್ಯಕ್ರಮದ ದೂರದರ್ಶನದ ಹಕ್ಕುಗಳನ್ನು ನಾವು ಮಾರಿಬಿಟ್ಟಿದ್ದೇವೆ' ಎಂದು ಡ್ರೆಸ್ ರಿಹರ್ಸಲ್‌ನಿಂದ ವರದಿಗಾರರನ್ನು ಹೊರಗಟ್ಟುತ್ತಾ ಹೇಳಿತು. ಪರಮೇಶ್ವರ್ ಗಾಡ್ರೇಜ್ 'ನಮ್ಮ ಗಾಡ್ರೇಜ್ ಉತ್ಪಾದನೆಗಳಿಗೆ ಹೆಚ್ಚಿನ ಪ್ರಸಾರ ಕೊಡಲು 'ವಿಶ್ವ ಸುಂದರಿ ಸ್ಪರ್ಧೆ' ಹಾಗೂ 'ಸಿಂತಾಲ್ ಸೂಪರ್ • ಮಾಡೆಲ್ ಸ್ಪರ್ಧೆ'ಯನ್ನು ಪ್ರಾಯೋಜಿಸಲು ನಿರ್ಧರಿಸಿದೆವು. ಸೌಂದರ್ಯ ಸ್ಪರ್ಧೆಯ ಕಾರಣದಿಂದಾಗಿ ಸಿಂತಾಲ್ ಮತ್ತೆ ಮಾರುಕಟ್ಟೆಯಲ್ಲಿ ಮೇಲೇರಿದೆ' ಎಂದು ಹಿಗ್ಗಿದರು. ಅಲ್ಲಿಗೆ ಪ್ರಾಯೋಜಿತ ಕಂಪನಿಗಳ ಧ್ಯೇಯೋದ್ದೇಶ, ಎ.ಬಿ.ಸಿ.ಎಲ್.ನ ಉದ್ದೇಶ ಸಾಧಿಸಿದ್ದಾಯಿತಲ್ಲ.

ಅಷ್ಟೆಲ್ಲ ಪ್ರಚಾರ ಮಾಡಿ, ಸ್ಪಾಸ್ಟಿಕ್ ಮಕ್ಕಳಿಗಾಗಿಯೇ ಸ್ಪರ್ಧೆಯೇನೋ ಎಂಬುವಂತೆ ಹಾರಾಡಿ, ಒಬ್ಬೊಬ್ಬ ಸುಂದರಿಯರ ಕೈಗೂ ಒಂದೊಂದು ಕೂಸು ಕೊಟ್ಟು ಟಿ.ವಿ.ಯಲ್ಲಿ ಮುಖ ಇಣುಕಿಸಿ, ನಗಿಸಿ, ಕಡೆಗೆ ಮಾಹಾದಾನಿಗಳು ಸ್ಪಾಸ್ಟಿಕ್ ಮಕ್ಕಳಿಗೆ ಕೊಟ್ಟಿದ್ದೆಷ್ಟು - ಮೂರು ಲಕ್ಷ ರೂಪಾಯಿ! ಆದರೆ ಎ.ಬಿ.ಸಿ.ಎಲ್. ಗಳಿಸಿದ್ದು? ಉಳಿದದ್ದೆಲ್ಲ ಇರಲಿ, ವಿಶ್ವ ದೂರದರ್ಶನ ಜಾಲದ ಹಕ್ಕು ಮ್ಮಾರಿಯೇ 150 ಕೋಟಿ ಸಂಪಾದಿಸಿತು. ಟಿಕೆಟ್ ಮಾರಿಯೇ ಮೂರು ಕೋಟಿ. ಸರಕಾರ ಮಾತ್ರ ಭದ್ರತಾ ವ್ಯವಸ್ಥೆಗೆ ಹತ್ತು ಕೋಟಿ ಖರ್ಚು ಮಾಡಿ, ಎ.ಬಿ.ಸಿ.ಎಲ್.ನಿಂದ ಎರಡು ಕೋಟಿ ಮಾತ್ರ ವಸೂಲು ಮಾಡಲು ಸಾಧ್ಯವಾಗಿ, ಉಳಿದ ಎಂಟು ಕೋಟಿ ಕಳಕೊಂಡಿತು.

ಅಂದಹಾಗೆ 'ಉದ್ದೇಶದೊಡನೆ ಸೌಂದರ್ಯ' ಎಂಬ ಸಂದೇಶವನ್ನು ವಿಶ್ವಾದ್ಯಂತ ಹೇಗೆ ಪ್ರಚುರ ಪಡಿಸುತ್ತೀರಿ? ಎಂದು ಕಿರೀಟ ಗೆದ್ದ ಗ್ರೀಸ್ ಸುಂದರಿ ಅಯೋನಾ ಸ್ಕೀವರನ್ನು ಕೇಳಿದಾಗ ಆಕೆಯ ಉತ್ತರ - ನಿರುತ್ತರ. ತಟ್ಟನೆ ವಿಶ್ವಸುಂದರಿ ಸಂಘಟನೆಯ ಮುಖ್ಯಸ್ಥೆ ಜೂಲಿಯಾ ಮಾರ್ಲಿ ಪಿಸುಗುಟ್ಟಿದರು - 'ಗೆಳೆಯರೇ, ಆಕೆ ಇನ್ನೂ ಚಿಕ್ಕವಳು'. ಅಂತೂ ಈ ಚಿಕ್ಕ ಪುಟ್ಟ ಹುಡುಗಿಯರಿಗೆ ನಡಿಗೆಯನ್ನು, ಉಡುಗೆಯನ್ನು, ಇಷ್ಟಗಲ ನಗುವುದನ್ನು ಹೇಳಿಕೊಟ್ಟ ಮೇಲೆ 'ಬಡಬಗ್ಗರ ಮೇಲೆ ಪ್ರೀತಿಯನ್ನು, ವಿಶ್ವಶಾಂತಿ'ಯ ಮೇಲೆ ಉಲಿಯುವುದನ್ನು ಕಲಿಸುವುದೇನು ಕಷ್ಟ?

ಈ ಸೌಂದರ್ಯ ಸ್ಪರ್ಧೆಯಿಂದ ಬೆಂಗಳೂರಿಗೆ ಭಾರೀ ಲಾಭವಾಗಲಿದೆ, ಬೆಂಗಳೂರಿಗೆ ಪ್ರವಾಸಿಗಳು ದೌಡಾಯಿಸಿ ಬರುತ್ತಾರೆ ಎಂದು ಸಾರಿದ್ದರು. ಇತ್ತೀಚೆಗಷ್ಟೇ ಪ್ರವಾಸೋದ್ಯಮ ಮಂತ್ರಿ ಲೀಲಾದೇವಿ ಆರ್. ಪ್ರಸಾದ್ 'ಕರ್ನಾಟಕದ ಪ್ರವಾಸೋದ್ಯಮ ವಿಶ್ವಸುಂದರಿ ಸ್ಪರ್ಧೆಯಿಂದ ಯಾವ ರೀತಿಯಲ್ಲೂ ಲಾಭ ಗಳಿಸಲಿಲ್ಲ' ಎಂದು ಸ್ಪಷ್ಟ ಪಡಿಸಿದ್ದಾರೆ. ಇಡೀ ವಿಶ್ವಕ್ಕೇ ಭಾರತೀಯ ಸಂಸ್ಕೃತಿಯನ್ನು 'ಶೋ ಕೇಸ್' ಮಾಡಿ ತೋರಿಸುತ್ತೇವೆ ಎಂದು ಸಾರಿದ ಪ್ರಾಯೋಜಕರು, ವಿದೇಶದ ಪ್ರಸಾರಕ್ಕೆ 'ಶೋ' ಮಾಡಿದ ಭಾರತೀಯ ಸಂಸ್ಕೃತಿ ಎಂದರೆ ಅಲೀಶಾ ಚಿನಾಯ್' ಹಾಡು, 'ಪ್ರಭುದೇವ'ನ ಕುಣಿತ ಮಾತ್ರ. ಬಿಡುವಿಲ್ಲದಂತೆ ಸುರಿದ ಜಾಹಿರಾತುಗಳ ನಡುವೆ ತೂರಿ ಬಂದ ಸಿನೆಮಾ ಮಾದರಿಯ ಕೂಚಿಪುಡಿ, ಭಾಂಗ್ರಾ, ಯಕ್ಷಗಾನ ಎಲ್ಲವೂ ನಮಗೆ, ಭಾರತದ ವೀಕ್ಷಕರಿಗೆ ಮೀಸಲು.

1994, ಸ್ಥಳ ಮನಿಲಾ, ಫಿಲಿಫೈನ್ಸ್. ಸುಶ್ಮಿತಾ ಸೇನ್, ಬಡವರ ನೊಂದವರ ಬಗ್ಗೆ ಕರುಣೆ ಉಕ್ಕಿ ಉಕ್ಕಿ ಹರಿಸಿ 'ತನ್ನ ಶಾಲೆಯ ದಿನಗಳಿಂದಲೂ ತಾನು ಆರಾಧಿಸಿದ ಮದರ್ ತೆರೇಸಾಳನ್ನು ಕಾಣುವುದೇ ತನ್ನ ಬದುಕಿನ ಅತಿದೊಡ್ಡ ಆಸೆ' ಎಂದು ಸಾರಿ ವಿಶ್ವಸುಂದರಿ ಕಿರೀಟ ಗಟ್ಟಿ ಮಾಡಿಕೊಂಡು, 32 ಕ್ಯಾರೆಟ್ ವಜ್ರದ ಒಡವೆಗಳನ್ನು ಲಾಸ್ ಏಂಜಲೀಸ್‌ನಲ್ಲಿ ವೈಭವದ ಅಪಾರ್ಟಮೆಂಟನ್ನು, ಆಡಂಬರದ ಸ್ಪೋರ್ಟ್ಸ್ ಕಾರನ್ನು, ಹವಾನಾದಲ್ಲಿ ರಜೆಯನ್ನು, ಮಿಂಕ್ ಕೋಟು, ಜಾಕೆಟ್, ಸಂಜೆಯ ಪಾರ್ಟಿ ಗೌನುಗಳು, ಇನ್ನು ಏನೇನನ್ನೋ ಪಡಕೊಂಡಳು. 'ಸಾವಿ' ಪತ್ರಿಕೆ ಇಂಥಾ ಬಡವರಿಗೆ ನೊಂದವರಿಗೆ ಹೃದಯ ಕರಗುವ ಮದರ್ ತೆರೇಸಾಳ ಉತ್ಕಟ ಪ್ರೇಮಿಯನ್ನು ಮದರ್ ತೆರೇಸಾಳ ಹಾದಿಯಲ್ಲಿ ನಡೆಯಲು ಆಹ್ವಾನಿಸಿದಾಗ, 'ಪಾಪ ದೂರದಿಂದ ಬಂದಿದ್ದಾರೆ. ಆಕೆ ನಿಜಕ್ಕೂ ನಮ್ಮ ಗೌರವಕ್ಕೆ ಪಾತ್ರಳಾಗಬೇಕು. ನಾನು ಶಾಲೆಯಲ್ಲಿ ಆಕೆಯನ್ನು ಆರಾಧಿಸುತ್ತಿದ್ದುದು ನಿಜ, ಆದರೆ ಅಡ್ಮೈರ್ ಮಾಡುವುದು, ಆಕೆ ಮಾಡುವುದನ್ನು ಮಾಡುವುದು ಎರಡೂ ಒಂದೇ ಅಲ್ಲ...' ಎಂದು ಸಾರಿದರು.

ಆದರೆ ಸುಶ್ಮಿತಾ ಬಡಬಗ್ಗರ ಮೇಲೆ ಮಾತಿನ ಪ್ರೀತಿ ಹರಿಸಿ ಶ್ರೀಮಂತಳಾದ ಮೇಲೆ ಎಲ್ಲ ಸುಂದರಿಯರಿಗೂ ದೀನದಲಿತರ ಸೇವೆಯೇ ತಮ್ಮ ಪರಮ ಗುರಿಯಾಯಿತು. ಮಿಸ್ ಫಿಲಿಪೈನ್ಸ್ Daisy Reyes 'ನನ್ನ ಫೋಟೋಗಳೇಕೆ ಪತ್ರಿಕೆಗಳಲ್ಲಿ ಬಂದಿಲ್ಲ. ದಯವಿಟ್ಟು ನನ್ನ ಫೋಟೋ ಹಾಕಿ. ನಾನು ವಿಶ್ವಸುಂದರಿ ಸ್ಪರ್ಧೆ ಆದಮೇಲೆ 'ಮದರ್ ತೆರೇಸಾ' ಆಗಬೇಕೆಂದು ನಿರ್ಧರಿಸಿದ್ದೇನೆ.

ಪ್ರಪಂಚದ ನೊಂದ ಮಕ್ಕಳ ಸೇವೆಗೆ ನಿಲ್ಲುತ್ತೇನೆ.' ಎಂದು ಪತ್ರಕರ್ತರನ್ನು ಹಿಡಿದು ಬೇಡಿದಳು. ಆದರೆ ಏಕೋ ತೀರ್ಪುಗಾರರು ಈ ಬಾರಿ ಮದರ್ ತೆರೇಸಾ ಹೆಸರಿಗೆ ಕರಗಿದಂತಿಲ್ಲ.

'ಈಜುಡುಪು ತೊಟ್ಟರೇನು ತಪ್ಪು, ಈಜುವಾಗ ತೊಡುವುದಿಲ್ಲವೆ, ಜಿಮ್ನಾಸ್ಟಿಕ್ ಮಾಡುವಾಗ ಆಟಗಾರ್ತಿಯರು ತೊಡುವುದಿಲ್ಲವೆ?' ಎಂದು ವಾದಿಸಿದ ಸುಂದರಿಯರು, ಈಜುಡುಪು ಸ್ಪರ್ಧೆ ಸಿಷಲ್ಸ್‌ನಲ್ಲಿಯೇ ಮುಗಿದಿದ್ದರೂ, ಈಜಾಡಲು ತೊಡುವ ಎರಡು ತುಂಡಿನಲ್ಲೇ ಸ್ಟೇಜಿನ ಮೇಲೆ ಬಂದರು. ಸದ್ಯ ಸ್ನಾನ ಮಾಡುವಾಗ ಬಟ್ಟೆ ಬಿಚ್ಚುವುದಿಲ್ಲವೇ ಎಂದು ಯಾರೂ ಕೇಳಲಿಲ್ಲ.

ಕಿರೀಟ ತೊಟ್ಟ ಸುಂದರಿ ಲಕ್ಷ ಲಕ್ಷ ಗಳಿಸಿದಳು. ಪ್ರಾಯೋಜಿತ ಕಂಪನಿಗಳು ಕೋಟಿಗಟ್ಟಲೆ ಬಾಚಿಕೊಂಡವು. ಹಗಲೂ ರಾತ್ರಿ ಸುಂದರಿಯರನ್ನು ಕಾದು, ಪ್ರತಿಭಟಿಸಿದವರನ್ನು ಚಚ್ಚಿ, ಬೀದಿ ಅಲೆದ ಪೋಲೀಸರಿಗೆ ಮಾತ್ರ ದಕ್ಕಿದ್ದು, ದಿನಕ್ಕೆ ಇಪ್ಪತ್ತು ರೂಪಾಯಿ - ಊಟದ ವೆಚ್ಚ!

**ಸುಂದರ ಬೆಂಗಳೂರಿನ ಕನಸು!**

'ನೀರು, ವಿದ್ಯುತ್ತಿನಂಥಾ ಮೂಲಭೂತ ಸೌಕರ್ಯಗಳಿಗೇ ಕೊರತೆ ಇರುವ ಬೆಂಗಳೂರಲ್ಲಿ ಪ್ರವಾಸಿಗರಿಗೆ ನೀಡಲು ಏನಿದೆ? ನಮ್ಮ ಆಟೋಗಳಲ್ಲಿ ಕುಳಿತು ಗಟಾರ ತುಂಬಿದ ರಸ್ತೆಗಳಲ್ಲಿ ಒಮ್ಮೆ ಸುತ್ತು ಹಾಕಿ ಬಂದ ಯಾವ ಪ್ರವಾಸಿಯೂ ಮತ್ತೊಮ್ಮೆ ಬೆಂಗಳೂರತ್ತ ತಿರುಗಿ ನೋಡೋಲ್ಲ' ಎಂದಾಗ, ಭಾರೀ ಹೋಟಲು ಅಧಿಕಾರಿಯೊಬ್ಬರು - 'ಈಗಿರುವ ಪಬ್‌ಗಳ ಜೊತೆ ಒಂದಿಷ್ಟು ಜೂಜಾಡುವ ಕ್ಯಾಸಿನೋಗಳನ್ನು, ನೈಟ್ ಕ್ಲಬ್‌ಗಳನ್ನು ತೆರೆದು ಬಿಟ್ಟರೆ ಬೆಂಗಳೂರು ದುಬಾಯ್ ಆಗಿ ಪ್ರವಾಸಿಗರನ್ನು ಆಕರ್ಷಿಸುತ್ತದೆ' ಎಂದು ಸಲಹೆ ನೀಡಿದ್ದಾರೆ!

'ಸೌಂದರ್ಯ ಸ್ಪರ್ಧೆ'ಯಿಂದ ಬೆಂಗಳೂರು ಭಾರೀ ಸ್ವಚ್ಛವಾಗುತ್ತೆ, ಸುಂದರವಾಗುತ್ತದೆ ಎಂದು ಸಾರಿದ್ದರು. ನವೆಂಬರ್ 11ನೇ ತಾರೀಖು ರಾತ್ರಿ ಸುಂದರಿಯರು ಬಂದಿಳಿದಾಗ ಏರ್‌ಪೋರ್ಟ್ ರಸ್ತೆ ಕೂಡಾ ಸ್ವಚ್ಛವಾಗಿರಲಿಲ್ಲ. ಮುಂದಿನ ವಾರವೆಲ್ಲ ರಸ್ತೆ ಬದಿಯ ಹುಲ್ಲು-ಕಸ ಕಿತ್ತು, ಅಡ್ಡಕಲ್ಲುಗಳಿಗೆ ಆದಷ್ಟು ಗುಡಿಸಿ ರಪ ರಪ ಕಪ್ಪು ಹಳದಿ ಬಣ್ಣ ಬಳಿದಿಟ್ಟರು. ರಸ್ತೆ ಮಧ್ಯೆಯ ರೋಡ್ ಡಿವೈಡರ್ ಜಾಗದಲ್ಲಿ ಬೆಳೆದು ನಿಂತ ಪೊದೆಗಳನ್ನೆಲ್ಲ ಕೆರೆದು ಕಿತ್ತು ಹಾಕಿ ನೀರು ಹೊಯ್ದು ಧೂಳಡಗಿಸಿ ತಟ್ಟನೆ ಹುಲ್ಲು ಬೆಳೆಯಲಾರದಿದ್ದರೇನು, ಮುಳ್ಳು ನೆಡೋಣ ಎಂಬಂತೆ ಭಾರೀ ಕತ್ತಾಳೆಗಳನ್ನು ತಂದು ನೆಲಕ್ಕೆ ಸಿಗಿಸಿದರು. ಈ ಹಾದಿಯಲ್ಲಿ ಒಂದೊಂದು ದೀಪದ ಕಂಬಕ್ಕೂ ಸಿಗಿಸಿದ್ದ ಎರಡೆರಡು ಹೂವಿನ ಕುಂಡಗಳು, ಜನ್ಮದಲ್ಲೇ ನೀರು ಆರೈಕೆ ಕಾಣದೆ ಒಣಗಿ ಖಾಲಿಯಾಗಿ, ಬಣ್ಣ ಕಳಕೊಂಡು ನೇತಾಡುತ್ತಿದ್ದುವು. ಆದರೆ ಸುಂದರಿಯರು ಹೊರಡುವ ದಿನ ಇದ್ದಕ್ಕಿದ್ದಂತೆ ಹಳೆ ಕುಂಡಗಳು ಮಾಯವಾಗಿ, ಹಸಿರು ಬಣ್ಣ ಬಳಿದ ಹೊಸ ಹೂ ತುಂಬಿದ ಕುಂಡಗಳು ನಳನಳಿಸಿದವು. ಸುಂದರಿಯರು ಹೋದ ಮೇಲೆ ಬೆಂಗಳೂರಿಗೆ ಸೌಂದರ್ಯದ ಅಗತ್ಯವಿಲ್ಲ ಎಂದು ಈ ಕುಂಡಗಳು ಮತ್ತೆ ನೀರು ಕಾಣದೆ ಒಂದು ದಿನದ ಸಂಭ್ರಮದ ನಂತರ ಈಗ ಒಣಗಿ ಕಡ್ಡಿಗಳಾಗಿ 'ಸೌಂದರ್ಯ ಸ್ಪರ್ಧೆ'ಯ ಪಳಿಯುಳಿಕೆಗಳಾಗಿ ನಿಂತಿವೆ.

ಇಷ್ಟೆಲ್ಲ ಆದರೂ, ತಾತ್ಕಾಲಿಕವಾಗಿಯಾದರೂ ಸ್ವಚ್ಛವಾದದ್ದು ಏರ್‌ಪೋರ್ಟ್‌ನಿಂದ ವಿಂಡ್ಸರ್ ಮೇನರ್‌ಗೆ ಹೋದ ರಸ್ತೆ ಮಾತ್ರ. ಒಂದಿಷ್ಟು ಎಂ.ಜಿ. ರಸ್ತೆ, ಬ್ರಿಗೇಡ್ ರಸ್ತೆಗಳೂ ಸುಣ್ಣ ಬಣ್ಣ ಕಂಡವು. ಆದರೆ ನಿಮ್ಮ ಮನೆಗಳ ಎದುರಿನ ಕಸದ ತೊಟ್ಟಿಗಳಿಗೆ, ನಮ್ಮ ಮನೆಗಳ ಎದುರಿನ ರಸ್ತೆ ಗಟಾರಗಳಿಗೆ ಸುಂದರಿಯರ ಆಗಮನದ ಸುದ್ದಿಯೇ ಮುಟ್ಟಲಿಲ್ಲ.

**ಬುದ್ಧಿಮತ್ತೆಯ ಸ್ಪರ್ಧೆ ಕೂಡ!**

ವಿವಿಧ ಸಮಾರಂಭಗಳಲ್ಲಿ ಮಾಜಿ ಸೌಂದರ್ಯ ರಾಣಿಯರು 'ಇದು ಕೇವಲ ದೇಹವನ್ನು ಅಳತೆ ಮಾಡುವುದಲ್ಲ, ನಮ್ಮ ಬುದ್ಧಿಮತ್ತೆಯ ಸ್ಪರ್ಧೆ, ಅಂತರಿಕ ಸೌಂದರ್ಯವನ್ನು ನೋಡುತ್ತಾರೆ' ಎಂದು ಒತ್ತಿ ಒತ್ತಿ ಹೇಳಿದರು. 'ಫೆಮಿನಾ' ಪತ್ರಿಕೆಯಲ್ಲಿ ಮುಂದಿನ ವರ್ಷದ ಮಿಸ್. ಇಂಡಿಯಾ ಸ್ಪರ್ಧೆಗೆ ಅರ್ಜಿಗಳನ್ನು ಆಹ್ವಾನಿಸಿದ್ದಾರೆ. '23 ವರ್ಷದ ಒಳಗಿನ ಯುವತಿಯರು, ಅವಿವಾಹಿತರು, 5 ಅಡಿ, 6 ಇಂಚು ಎತ್ತರಕ್ಕೆ ಕಡಿಮೆ ಇಲ್ಲದವರು, ತಮ್ಮ vital statistics ಜೊತೆಗೆ ಅರ್ಜಿ ಹಾಕಿಕೊಳ್ಳಬಹುದು'. (ಈ ಸ್ಪರ್ಧೆಯ ತೀರ್ಪು ಇತ್ತೀಚೆಗೆ ಹೊರಬಿದ್ದಿದೆ) ಇಲ್ಲಿ ಮಿದುಲನ್ನು ಎಲ್ಲಿ ಅಳೆಯುತ್ತಿದ್ದಾರೆ ತಿಳಿಯಲಿಲ್ಲ. 23 ದಾಟಿದ ಹುಡುಗಿಯರು ಸುಂದರಿಯರಲ್ಲ, ವಿವಾಹಿತರಂತೂ ಅಲ್ಲವೇ ಅಲ್ಲ, ದೇಶದ ಸರಾಸರಿ ಎತ್ತರ, 5 ಅಡಿ 2 ಅಂಗುಲ ಇರುವಾಗ, ಇವರ ಸೌಂದರ್ಯದ ಮಾನದಂಡ 5 ಅಡಿ, 6 ಅಂಗುಲ! ಇಂಚು ಪಟ್ಟಿಯಲ್ಲಿ ಎಲ್ಲ ಸೌಂದರ್ಯವನ್ನು ಅಳೆದು ಮುಗಿದ ಮೇಲೆ, ಕೊನೇ ರೌಂಡಿನಲ್ಲಿ ನಾಲ್ಕು ಪ್ರಶ್ನೆ ಕೇಳಿ, ತೋರಿಕೆಯ ಉತ್ತರಗಳಲ್ಲಿ ಬುದ್ಧಿಮತ್ತೆಯನ್ನು ನಿರ್ಧರಿಸುತ್ತಾರೆ, ಅತಿ ಬುದ್ಧಿವಂತರು! 'ಮಿಸ್ ಪರ್ಸನಾಲಿಟಿ' ಸ್ಪರ್ಧೆಯಲ್ಲೂ ಈ ಸುಂದರಿಯರು ಬಾಯಿ ಬಿಡುವ ಅಗತ್ಯ ಇರಲಿಲ್ಲ. ಗ್ರೀಕ್ ಸುಂದರಿಗೆ ಕಿರೀಟ ತಂದು ಕೊಟ್ಟ ಉತ್ತರ ಏನು ಗೊತ್ತೆ - 'ಪ್ರಸಕ್ತ ವಿಶ್ವದಲ್ಲಿ ಮಹಿಳೆಯ ಪಾತ್ರ ತಾಯಿಯಾಗಿ, ಪತ್ನಿಯಾಗಿ ಜವಾಬ್ದಾರಿಯನ್ನು ನಿರ್ವಹಿಸುವುದು, ಜೊತೆಗೆ ಉದ್ಯೋಗಿಯಾಗಿಯೂ ಕುಟುಂಬ, ಸಮಾಜಕ್ಕೆ ಉಪಯುಕ್ತಳಾಗುವುದು'. ಈ ಒಂದು ಉತ್ತರದಲ್ಲಿ ಆಕೆಯ ಅಂತರಿಕ ಸೌಂದರ್ಯ, ಬುದ್ಧಿವಂತಿಕೆ ಎಲ್ಲವನ್ನೂ ಅಳೆದು ಸುರಿದರು.

*ಸಂಗ್ರಹ : ನೇಮಿಚಂದ್ರ*

## ಅಪರೂಪದ ಮೆರವಣಿಗೆ; ಕಂಡರಿಯದ ಜನಸಾಗರ

ಪತ್ರಕರ್ತರೇ ನೋಡಿ ನೋಡಿ
ಜನ ಯಾರ ಕಡೇಗಿದೆ
ಮುಖ್ಯಮಂತ್ರಿಗಳೇ ನೋಡಿ ನೋಡಿ
ಜನ ಯಾರ ಕಡೇಗಿದೆ

ಈ ಘೋಷಣೆಗಳನ್ನು ಕೂಗುತ್ತಾ ಬೃಹತ್ ಮಹಿಳಾ ಸಮುದಾಯವು ಸಹಸ್ರ ಸಂಖ್ಯೆಯಲ್ಲಿ ಬೆಂಗಳೂರಿನ ಪ್ರಮುಖ ಜನನಿಬಿಡ ಸ್ಥಳವಾದ ಮೆಜೆಸ್ಟಿಕ್ ವೃತ್ತದ ಸುತ್ತ ಪ್ರತಿಭಟನೆಯಲ್ಲಿ ನಡೆಯಿತು. ತಮ್ಮ ವ್ಯಾಪಾರ, ವ್ಯವಹಾರಗಳಲ್ಲಿ ತೊಡಗಿದ್ದ ಜನರೂ ಸೇರಿದಂತೆ ಜನಸಾಮಾನ್ಯರು ಹಲವು ನಿಮಿಷಗಳ ಕಾಲ ಸ್ತಬ್ಧರಾಗಿ ನಿಂತರು. ಪ್ರತಿಭಟಿಸುತ್ತಿದ್ದ ಮಹಿಳೆಯರ ಘೋಷಣೆಗಳನ್ನು ಆಲಿಸುತ್ತಾ ಜನ ಸಾಗರವನ್ನು ಕಂಡು ಬೆಕ್ಕಸ ಬೆರಗಾದರು.

ನವೆಂಬರ್ 17, 1996ರಂದು ಸೌಂದರ್ಯ ವಿರೋಧಿ ಕ್ರಿಯಾಸಮಿತಿಯು ವಿಶ್ವಸುಂದರಿ ಸ್ಪರ್ಧೆಯನ್ನು ವಿರೋಧಿಸಲು ಒಂದು ಬೃಹತ್ ಪ್ರತಿಭಟನೆಯನ್ನು ಏರ್ಪಡಿಸಿತ್ತು. ನಗರದಲ್ಲಿ ಆ ವೇಳೆಗಾಗಲೇ ಆವರಿಸಿದ್ದ ಸೆಕ್ಷನ್ 35ರ ನಡುವಿನಲ್ಲೇ ಏರ್ಪಾಡಾಗಿದ್ದ ಈ ಬೃಹತ್ ಮೆರವಣಿಗೆಯನ್ನು ಸುಭಾಷ್‌ಚಂದ್ರ ಬೋಸರ INA ಸೈನ್ಯದಲ್ಲಿ ಕ್ಯಾಪ್ಟನ್‌ರಾಗಿದ್ದ ಲಕ್ಷ್ಮಿ ಸೆಹಗಾಲ್‌ರವರು ಉದ್ಘಾಟಿಸಿದರು. ಅವರ ಭಾಷಣದ ನಂತರ ಮೆರವಣಿಗೆ ಹೊರಟಿತು. ಪ್ರತಿಭಟನೆಯ ಮುಂದಾಳುತ್ವದಲ್ಲಿ ಅಖಿಲ ಭಾರತ ಪ್ರಜಾಸತ್ತಾತ್ಮಕ ಮಹಿಳಾ ಸಂಘಟನೆಯ ಜಂಟಿ ಕಾರ್ಯದರ್ಶಿ ಹಾಗೂ ಮಾಜಿ ಲೋಕ ಸಭಾ ಸದಸ್ಯೆ ಶ್ರೀಮತಿ ಸುಭಾಷಿಣಿ ಅಲಿ, ವಿರೋಧಿ ಕ್ರಿಯಾ ಸಮಿತಿಯ ಸಂಚಾಲಕರಾದ ಹೇಮಲತಾ ಮಹಿಷಿ, ಡಾ|| ವಿಜಯಾ, ಕೆ.ಎಸ್. ವಿಮಲ, ನಾಗಮೋಹನದಾಸ್, ಡಾ|| ಜಿ. ರಾಮಕೃಷ್ಣ, ಪ್ರೊ.ಜಿ.ಕೆ. ಗೋವಿಂದರಾವ್ ಜನವಾದಿ ಮಹಿಳಾ ಸಂಘಟನೆಯ ರಾಜ್ಯ ಕಾರ್ಯದರ್ಶಿ ಶ್ರೀಮತಿ ನೀಲ, ಜಾಗೃತಿ ಮಹಿಳಾ ಅಧ್ಯಯನ ಕೇಂದ್ರದ ಎನ್. ಗಾಯತ್ರಿ ಮೊದಲಾದವರಿದ್ದರು.

ಮಹಾರಾಷ್ಟ್ರ, ಕೇರಳ, ತಮಿಳು ನಾಡು, ಆಂಧ್ರ, ಮುಂತಾದ ನೆರೆರಾಜ್ಯಗಳಿಂದಲೂ ಮತ್ತು ಕರ್ನಾಟಕದ ವಿವಿಧ ಭಾಗಗಳಿಂದಲೂ ಪ್ರಜಾಸತ್ತಾತ್ಮಕ ಮಹಿಳಾ ಸಂಘಟನೆಯ ನೂರಾರು ಮಹಿಳೆಯರು ನಗರಕ್ಕೆ ಆಗಮಿಸಿ ಈ ಪ್ರತಿಭಟನೆಯಲ್ಲಿ ಭಾಗವಹಿಸಿದ್ದರು. ಸಾಗರದಂತೆ ನಗರದ ಪ್ರಮುಖ ಬೀದಿಯಲ್ಲಿ ಸಂಚರಿಸಿದ ಈ ಮಹಿಳೆಯರು ಸೌಂದರ್ಯ ಸ್ಪರ್ಧೆಗಳ ತಾಣವಾದ ವಿಂಡ್‌ಸರ್ ಮ್ಯಾನರ್‌ನ ಅಭಿಮುಖವಾಗಿ ಸಾಗುತ್ತಿರುವಾಗ ಪೋಲೀಸರಿಂದ ಆನಂದ ರಾವ್ ವೃತ್ತದ ಬಳಿ ತಡೆ ಹಿಡಿಯಲ್ಪಟ್ಟರು. ಸುಮಾರು 3 ಗಂಟೆಗಳ ಕಾಲ ಈ ವೃತ್ತದಲ್ಲಿ ಪ್ರತಿಭಟನಾ ಬಹಿರಂಗ ಸಭೆಯನ್ನು ನಡೆಸಲಾಯಿತು. ಈ ಸಭೆಯಲ್ಲಿ ಶ್ರೀಮತಿ ಸುಭಾಷಿಣಿ ಅಲಿ, ಪ್ರೊ. ಜಿ.ಕೆ. ಗೋವಿಂದರಾವ್, ಶ್ರೀ ಸೂರ್ಯನಾರಾಯಣ ರಾವ್, ಶ್ರೀ ಶ್ರೀರಾಂರೆಡ್ಡಿ, ಪಾಂಡಿಚೆರಿಯ ಶ್ರೀಮತಿ ಸುಧಾ ಮುಂತಾದವರು ಪ್ರತಿಭಟನಕಾರರನ್ನು ಉದ್ದೇಶಿಸಿ ಮಾತನಾಡಿದರು. ಸಭೆಯ ನಂತರ ವಿಂಡ್ಸರ್ ಮ್ಯಾನರ್‌ನ ದಿಕ್ಕಿನಲ್ಲಿ ಹೊರಟ ಮೆರವಣಿಗೆಯನ್ನು ತಡೆಯಲು ಹೊರಟ ಪೋಲೀಸರು ಸುಮಾರು ಒಂದು ರೀತಿ ಸಾವಿರಕ್ಕೂ ಹೆಚ್ಚಿನ ಮಂದಿಯನ್ನು ಬಂಧಿಸಿದರು.

'ಸುದ್ದಿ ಮೌಲ್ಯ'ದ ನೆಪ ಹೇಳಿ ಸೌಂದರ್ಯ ಸ್ಪರ್ಧೆಯ ವಿರೋಧಿಗಳ ಹಾಗೂ ಜನ ಸಾಮಾನ್ಯರ ಪ್ರತಿಭಟನೆಯನ್ನು ಕಡೆಗಣಿಸುತ್ತಾ ಬಂದ ಪತ್ರಿಕಾ ಮಾಧ್ಯಮದವರಿಗೆ ಹಾಗೂ ರಸಿಕ ಮುಖ್ಯ ಮಂತ್ರಿಯ ಹುಚ್ಚಿನ ತಾಳಕ್ಕೆ ಕುಣಿಯುತ್ತಲಿದ್ದ ಪೋಲೀಸ್ ಯಂತ್ರಕ್ಕೆ ಈ ಮಹಿಳಾ ಪ್ರತಿಭಟನೆ ಸವಾಲೊಡ್ಡಿತು.

## ಕಾವ್ಯ ಪ್ರತಿಭಟನೆ

ಬೆಂಗಳೂರಿನಲ್ಲಿ ನಡೆದ 'ಚರಿತ್ರಾರ್ಹ' ವಿಶ್ವಸುಂದರಿ ಸ್ಪರ್ಧೆಯ ಅಂತಿಮ ದಿನ ನವೆಂಬರ್ 23ರಂದು ಸೌಂದರ್ಯ ಸ್ಪರ್ಧೆ ವಿರೋಧಿ ಕ್ರಿಯಾಸಮಿತಿಯ ಆಶ್ರಯದಲ್ಲಿ 'ಕಾವ್ಯ ಪ್ರತಿಭಟನೆ' ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿತ್ತು. ರವೀಂದ್ರ ಕಲಾಕ್ಷೇತ್ರದ ಆವರಣದಲ್ಲಿ ವ್ಯವಸ್ಥೆಗೊಳಿಸಿದ್ದ ಈ ಕಾರ್ಯಕ್ರಮಕ್ಕೆ ಹಲವಾರು ಕವಿಗಳು, ಕಲಾವಿದರು ಸೌಂದರ್ಯ ಸ್ಪರ್ಧೆಯನ್ನು ವಿರೋಧಿಸಲೆಂದು ಬಂದಿದ್ದರು. ಚಿತ್ರ ಕಲಾವಿದರು ಸೌಂದರ್ಯ ಸ್ಪರ್ಧೆಗೆ ಸಂಬಂಧಪಟ್ಟವರ ಮುಖವಾಡಗಳನ್ನು ರಚಿಸಿ ಪ್ರದರ್ಶಿಸಿದರು.

ಈ ಸಾಂಸ್ಕೃತಿಕ ಪ್ರತಿಭಟನೆಯಲ್ಲಿ ಭಾಗವಹಿಸಲು ಬಂದಿದ್ದ ಕವಿಗಳು ಸೌಂದರ್ಯ ಸ್ಪರ್ಧೆಯನ್ನು ವಿರೋಧಿಸಿ, ಈ ವಸ್ತುವನ್ನಾಧರಿಸಿದ ಕವನಗಳನ್ನು ವಾಚಿಸಲೆಂದು ಇಲ್ಲಿಗೆ ಆಗಮಿಸಿದ್ದರು. ಕಾವ್ಯವಾಚನ ಆರಂಭಿಸಲೆಂದು ಕ್ರಾಂತಿಕಾರಿ ಕವಿ ವರವರರಾವ್ ಎದ್ದು ನಿಂತು ಮಾತನಾಡಲು ಆರಂಭಿಸಿದಾಗ ಅಲ್ಲಿಗೆ ಆಗಮಿಸಿದ ಪೋಲೀಸರು ಸೆಕ್ಷನ್ 35 ರಡಿ ಬಂಧಿಸುತ್ತಿರುವುದಾಗಿ ಹೇಳಿದರು. ಅಲ್ಲಿ ನೆರೆದಿದ್ದ ಕವಿಗಳು ಇದನ್ನು ಪ್ರತಿಭಟಿಸಿದರು. ಸೌಂದರ್ಯ ಸ್ಪರ್ಧೆ ವಿರೋಧಿ ಕ್ರಿಯಾಸಮಿತಿಯ ಸಂಚಾಲಕರಾದ ಪ್ರೊ. ಜಿ.ಕೆ. ಗೋವಿಂದರಾವ್, ಮತ್ತು ಡಾ||ಜಿ. ರಾಮಕೃಷ್ಣ ಅವರನ್ನೂ ಒಳಗೊಂಡಂತೆ 23 ಮಂದಿಯನ್ನು ಪೋಲೀಸರು ಬಂಧಿಸಿದರು.

ವಿಶ್ವಸುಂದರಿ ಸ್ಪರ್ಧೆ ದಿನ ಪೋಲೀಸರ ಅಡ್ಡಿಯಿಂದಾಗಿ ನಡೆಯಲಾಗದೇ ಹೋದ ಈ ಕಾರ್ಯಕ್ರಮವನ್ನು ಡಿಸೆಂಬರ್ 7ರಂದು ಅದೇ ಸ್ಥಳದಲ್ಲಿ ಶ್ರೀಮತಿ ಹೇಮಲತಾ ಮಹಿಷಿಯವರ ಅಧ್ಯಕ್ಷತೆಯಲ್ಲಿ ನಡೆಸಲಾಯಿತು. ಈ ಕಾರ್ಯಕ್ರಮದಲ್ಲಿ ಶಾಂತಾನಾಗರಾಜ್, ಬಿ.ಎನ್. ಸುಮಿತ್ರಾಬಾಯಿ, ಹೇಮಲತಾ ಮಹಿಷಿ, ದು.ನಂ. ಸರಸ್ವತಿ, ಎನ್. ರಮೇಶ್, ಡಾ|| ಮಂಜುನಾಥ್ ಇನ್ನು ಮುಂತಾದವರು ಕಾವ್ಯವಾಚನ ಮಾಡಿದರು.

> ಬರಲಿರುವ ದಿನಗಳಲಿ ಅವರು ಹೇಳುವುದಿಲ್ಲ;
> ತಾಮಸದ ಕಾಲವದು ಹಿಂದೆ ಇತ್ತೆಂದು;
> ಆದರೆ: ಕವಿಗಳೇತಕೆ ತಾವು ಮೂಕರಾದರು ಅಂತು?
> 
> – ಬರ್ಟೋಲ್ಟ್ ಬ್ರೆಕ್ಟ್

## ಹೊಸ ಬಗೆಯ ಪ್ರಶ್ನೆಗಳು - ಹೊಸ ವಸ್ತುಗಳು

**ಈ ಸ್ನೇಹ ಈ ಜೀವನ (ಕಾದಂಬರಿ)**
ಲೇಖಕಿ : ಲತಾ ರಾಜಶೇಖರ್
ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ
ಮೈಸೂರು, 1995.
ಪುಟ : 288, ಬೆಲೆ : ರೂ. 60/-

"ಅವನ ಮಾತು ಹಾಲಿನಂತೆ, ರೂಪ ಬೆಳದಿಂಗಳಂತೆ, ಹೃದಯ ತಾವರೆಯಂತೆ ಸುಂದರ, ಪವಿತ್ರ...

ಅವನು ಜ್ಞಾನ, ಪ್ರತಿಭೆಗಳ ದ್ಯೋತಕವಾಗಿದ್ದ, ಶಾಂತಿ ಪ್ರೀತಿಗಳ ಪ್ರತೀಕವಾಗಿದ್ದ. ಅವನದು ಗೌರವಾನ್ವಿತ ವ್ಯಕ್ತಿತ್ವ, ನೋಡಿದ ಕೂಡಲೇ ವಿಶ್ವಾಸ ಮೂಡಿಸುವ ಕಣ್ಣುಗಳು, ಸದಾ ಮುಗುಳ್ನಗೆ ಬೀರುವ ತುಟಿಗಳು."

ಇಂತಹ ಪುರುಷೋತ್ತಮ ಪತಿಯಿರುವಾಗ ಹೆಂಡತಿಗೆ ಬೇರೆ ಪುರುಷನ ಕಡೆಗೆ ಮನ ಸೆಳೆಯಲು ಸಾಧ್ಯವೇ? ಏಕೆ ಸಾಧ್ಯವಿಲ್ಲ? ಯಶೋಧರನ ಮಡದಿ ಅಮೃತಮತಿಯಿಲ್ಲವೇ?

ಶಿವ ತನಗೆ ಅಪ್ರತಿಮ ಸೌಂದರ್ಯವತಿಯಾದ ಪತ್ನಿ ಗೌರಿದೇವಿಯಿದ್ದೂ ಏಕೆ ಗಂಗೆಗೆ ಮರುಳಾದ? ವಿಷ್ಣುವಿಗೆ ಶ್ರೀದೇವಿ, ಭೂದೇವಿಯರಿದ್ದಾರೆ. ಶ್ರೀ ಕೃಷ್ಣನಿಗೆ ರುಕ್ಮಿಣಿ, ಸತ್ಯಭಾಮೆಯರೊಂದಿಗೆ ಹದಿನಾರು ಸಾವಿರ ರಾಣಿಯರಿದ್ದಾರೆ. ಶ್ರೀರಾಮನನ್ನು ಬಿಟ್ಟರೆ ಬಹಳಷ್ಟು ದೇವತೆಗಳಿಗೆ ಬಹು ಪತ್ನಿಯರಿದ್ದಾರೆ. ಆದರೆ ದೇವತೆಯರಿಗೆ ಬಹುಪತಿಗಳಿಲ್ಲವೇಕೆ?

ವಿಚಾರದ ಮೂಸೆಯಲ್ಲಿ ಇಂತಹ ಪ್ರಶ್ನೆಗಳಿಗೆ ಉತ್ತರ ಸಿಕ್ಕೀತೆ? ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಬಹುವಲ್ಲಭರನ್ನು ಹೊಂದುವ ಆಯ್ಕೆ, ಅವಕಾಶ ಹೆಣ್ಣಿಗೇಕಿಲ್ಲ? ಎಂದು ಪ್ರಶ್ನಿಸುವ, ಇಂತಹ ಅಪರೂಪದ ವಸ್ತುವನ್ನು ಕಾದಂಬರಿಯ ವಸ್ತುವನ್ನಾಗಿ ಮಾಡಿಕೊಂಡಿರುವ ಶ್ರೀಮತಿ ಲತಾರಾಜಶೇಖರ್‌ರವರ ಪ್ರಯತ್ನ ಒಂದು ಹೊಸ ಬಗೆಯದು.

'ಈ ಸ್ನೇಹ ಈ ಜೀವನ' - ಶ್ರೀಮತಿ ಲತಾರಾಜಶೇಖರ್‌ರವರ ಮೂರನೆಯ ಕಾದಂಬರಿ. ಜನಪ್ರಿಯ ಕಾದಂಬರಿಯಲ್ಲೇ ಆಕರ್ಷಕ ನಿರೂಪಣೆ, ಸಂಭಾಷಣೆ ಗಮನ ಸೆಳೆಯುತ್ತದಾದರೂ ಅವರು ಬಳಸಿರುವ ಕಾವ್ಯಾತ್ಮಕ, ರೊಮ್ಯಾಂಟಿಕ್ ಭಾಷೆ ವಸ್ತುವಿನ ವಿಚಾರಕ್ಕಿಂತ ಹೆಚ್ಚಾಗಿ ಭಾವನೆಗಳ ಮಹಾಪೂರದಲ್ಲಿ ಓದುಗನನ್ನು ಕೊಚ್ಚಿಕೊಂಡು ಹೋಗಿಬಿಡುತ್ತದೆ.

ಮಾನಸಿಕ ಔನ್ನತ್ಯ, ಹೃದಯ ವೈಶಾಲ್ಯಗಳಿಂದ ಕೂಡಿದ ಪುರುಷ ವ್ಯಕ್ತಿತ್ವದ ಬಗೆಗೆ ಲೇಖಕಿಗಿರುವ ಗೌರವ ಕಾದಂಬರಿಯಲ್ಲಿ ಉದಾತ್ತ ಪುರುಷ ಪಾತ್ರಗಳ ಚಿತ್ರಣಕ್ಕೆ ಕಾರಣವಾಗಿದೆ. ಈ ಕಾದಂಬರಿಯಲ್ಲಿ ಚರ್ಚಿಸಿರುವ ವಸ್ತುವನ್ನು ಸ್ತ್ರೀ ನೆಲೆಯಿಂದಲೇ ನೋಡುವ ಪ್ರಯತ್ನವನ್ನು ಮಾಡಿದ್ದಾರೆ. ಯಾವಾಗಲೂ ಹೆಣ್ಣಿನ ಸ್ವಾತಂತ್ರ್ಯದ ಅಭೀಪ್ಸೆಯನ್ನು ಪ್ರಕಟಿಸುತ್ತಾ ಹೋಗುವ ಕಾದಂಬರಿಯ ನಾಯಕಿ, ತನ್ನ ವೈಯುಕ್ತಿಕ ಪ್ರೇಮ ಪ್ರಸಂಗವನ್ನು ಇಡೀ ಮಹಿಳಾ ಸಮುದಾಯದ ವಸ್ತುವನ್ನಾಗಿ ವಿಸ್ತರಿಸಿರುವ ರೀತಿ ಕುತೂಹಲಕರವಾಗಿದೆ. ಇಲ್ಲಿ ವೈಯಕ್ತಿಕ ಮೌಲ್ಯವಾಗಿರುವ ಸಂಗಾತಿಗಳ ಆಯ್ಕೆ ಸಾಮಾಜಿಕ ಮೌಲ್ಯವಾಗಬೇಕೆಂಬ ಕಾದಂಬರಿಯ ನಾಯಕಿಯ ಆಕಾಂಕ್ಷೆಯೇನೇ ಇರಲಿ, ಅದಕ್ಕೆ ತಕ್ಕ ತಾರ್ಕಿಕ ಬೆಳವಣಿಗೆ ಕಾದಂಬರಿಯಲ್ಲಿ ಕಂಡು ಬರುವುದಿಲ್ಲ.

ನಾಯಕಿ ದೇವರನ್ನು ಪ್ರಶ್ನಿಸುತ್ತಾ 'ನೀನು ಹೆಣ್ಣಿಗೂ ಏಕೆ ಗಂಡಿನಂತೆ ಭಾವ, ಭಾವನೆಗಳನ್ನು ಕೊಟ್ಟೆ? ಯೋಚನೆ, ಆಲೋಚನೆಗಳನ್ನು ತುಂಬಿದೆ? ನಿನ್ನ ನಿಯಮದಲ್ಲಿ ಹೆಣ್ಣು ಕೇವಲ ಒಂದು ಭೋಗದ ವಸ್ತುವಾಗಿ ಮಾತ್ರ ಇರಬೇಕೆಂದಿದ್ದರೆ ಅವಳಿಗೆ ಮಿದುಳನ್ನು ಏಕೆ ಕೊಟ್ಟೆ? ಅದರಲ್ಲಿ ವೈಚಾರಿಕತೆಯ ಬೀಜವನ್ನೇಕೆ ನೆಟ್ಟೆ? ಎನ್ನುವ ಮಾತುಗಳಲ್ಲಿ ಕಾದಂಬರಿಯ ವೈಚಾರಿಕ ದರ್ಶನವಾಗುವುದಿಲ್ಲ. ಬದಲಿಗೆ ಇದೊಂದು ವಿರಳವಾದ ವೈಯುಕ್ತಿಕ ಘಟನೆಯಾಗಬಲ್ಲುದೇ ಹೊರತು ಕಾದಂಬರಿ ಎತ್ತುವ ಸಮಸ್ಯೆಗೆ ಪರಿಹಾರವಂತೂ ಆಗುವುದಿಲ್ಲ.

- ಆಶಾ

**ಗಗನ ಕುಸುಮ (ಕಥಾಸಂಕಲನ)**
ಲೇಖಕಿ : ವಾಣಿರಾವ್
ಪ್ರಭು ಪ್ರಕಾಶನ
ಬೆಂಗಳೂರು, 1996
ಪುಟ 169, ಬೆಲೆ. ರೂ.50/-

ಇತ್ತೀಚಿಗೆ ಸಣ್ಣಕತೆಗಳು, ಕಲಾತ್ಮಕತೆ ಹಾಗೂ ಸಂಕೀರ್ಣತೆಗಳಿಂದ ವೇಗವಾಗಿ ಬೆಳೆಯುತ್ತಿರುವ ಸಾಹಿತ್ಯ ಪ್ರಕಾರವಾಗಿದೆ. ಮಾಸ್ತಿಯವರ ಕಾಲದಲ್ಲಿದ್ದಂತೆ ಒಂದು ಪ್ರಸಂಗವನ್ನೂ, ಒಂದು ನೆನಪನ್ನೂ ಒಂದು ಬೆರಗನ್ನೋ ಇದ್ದಿದ್ದು ಇದ್ದ ಹಾಗೆ ವರ್ಣಿಸಿ ಬಿಡುವುದು ಮುಗಿದು, ಈ ಚಿಕ್ಕ ಪ್ರಕಾರದಲ್ಲೂ ವೈಚಾರಿಕತೆಯನ್ನೂ ತಾತ್ವಿಕ ನೆಲೆಗಳನ್ನೂ, ಬದುಕಿನ ಕೋಮಲತೆಯನ್ನೂ ಕಠೋರತೆಯನ್ನೂ ಹಿಡಿದಿಡುವುದು ಇಂದಿನ ಕತೆಗಾರರಿಗೆ ಸಾಧ್ಯವಾಗಿದೆ. ಓದಿಗೆ ಅಲ್ಪ ಸಮಯವನ್ನೂ, ಗಾಢ ಚಿಂತನ ಶೀಲತೆಗೆ ಮಾರ್ಗವನ್ನೂ, ಪಡೆಯುವ ಈ ಪ್ರಕಾರ ಹೆಚ್ಚು ಹೆಚ್ಚು ಜನಪ್ರಿಯತೆಯನ್ನೂ ಹೊಂದಿದೆ.

ಇಂದಿನ ಕತೆಗಾರ, ಕತೆಗಾರ್ತಿಯರ ಮೊದಲ ಸಮಸ್ಯೆ, ವಸ್ತು. ಹೊಸದಾದ, ಭಿನ್ನವಾದ ವಸ್ತುವಿಗಾಗಿ ಹುಡುಕಾಟವನ್ನು ಸೃಜನಶೀಲ ಮನಸ್ಸು ನಡೆಸುತ್ತಲೇ ಇರುತ್ತದೆ. ಅಂತಹ ಆಯ್ಕೆಯಲ್ಲಿ, ವಾಣಿರಾವ್‌ರವರು ತಮ್ಮ ಮೊದಲ ಕಥಾ ಸಂಕಲನ 'ಗಗನ ಕುಸುಮ'ದಲ್ಲಿ ಭಿನ್ನವಾದ ಅಪರೂಪವಾದ ವಸ್ತುವನ್ನು ದಾಖಲಿಸುತ್ತಾರೆ. ವಸಹಾತು

ಶಿಕ್ಷಣದ ಪರಿಕ್ರಮದಿಂದ ಆರಿಸಿಕೊಳ್ಳುವ ಉದ್ಯೋಗಗಳೆಲ್ಲ ಒಂದು ನೆಲಗಟ್ಟಿನದಾದರೆ ಸೈನ್ಯದ ಉದ್ಯೋಗ ಮತ್ತೊಂದು ನೆಲೆಯಲ್ಲಿ ನಿಲ್ಲುವಂತಹುದು. ಇಲ್ಲಿ ಸಾವು ವಿಚಿತ್ರನೆಲೆಯಲ್ಲಿ ನಿಂತು ಬದುಕಿರುವವರನ್ನು ಆಡಿಸುವಂಥದ್ದು. ಈ ಜನದಲ್ಲಿರುವ ಸಾವಿನ ಭಯಕ್ಕಿಂತ ಹೆಚ್ಚಾಗಿ ಅವರು ಸಾವನ್ನು ಸ್ವೀಕರಿಸುವ ಪರಿಯೇ ಸಾಮಾನ್ಯ ಜನರನ್ನು ಗೊಂದಲದಲ್ಲಿ ಕೆಡಹುವಂಥಾದ್ದು. ಈ ಎಲ್ಲ ವಿಚಾರಗಳೂ ವಾಣರಾವ್‌ರವರ ಕಥೆಗಳಲ್ಲಿ ಮೇಲಿಂದ ಮೇಲೆ ದಾಖಲಾಗುವ ವಿಚಾರಗಳು.

ಲೇಖಕಿ ಮುನ್ನುಡಿಯಲ್ಲಿ 'ಐವತ್ತು ವರ್ಷಗಳ ಹಿಂದಿನಿಂದ ಇಂದಿನವರೆಗೆ ನಡೆದುಬಂದ ಘಟನೆಗಳ ಹಿನ್ನೆಲೆಯಲ್ಲಿ ಈ ಕತೆಗಳ ವಸ್ತುವಿಗೆ ಜೀವತುಂಬಲಾಗಿದೆ. ಸಂದರ್ಭ-ಸನ್ನಿವೇಶಗಳ ಬದಲಾವಣೆಯೊಂದಿಗೆ, ಸಣ್ಣಕತೆಗಳ ಸೀಮಾರೇಖೆಯೊಳಗೆ, ಭಾವುಕತೆಗೆ ಚ್ಯುತಿಯಾಗದಂತೆ ಈ ಕೃತಿಯನ್ನು ಹೆಣೆಯಲಾಗಿದೆ' ಎನ್ನುತ್ತಾರೆ. ಅವರ ಗ್ರಹಿಕೆಯಲ್ಲಿ ಸಣ್ಣಕತೆಗಳಿಗೆ 'ಭಾವುಕತೆ' ಅತಿ ಅಗತ್ಯವಾಗಿರುವ ದ್ರವ್ಯ! ಆದರೆ ಈ ಭಾವುಕತೆಯ ಕಾರಣವಾಗಿಯೇ ಕೆಲವು ಕತೆಗಳು ತುಂಬ ಸುಂದರ ಎನಿಸಿದರೆ, ಕೆಲವು ಕತೆಗಳು ಭಾವುಕತೆಯ ಹದ ತಪ್ಪಿ ಹೋಗಿರುವುದರಿಂದ ಓದುಗರ ಮೆಚ್ಚಿಗೆ ಒಡಿದಿಡುವಲ್ಲಿ ಸೋತುಹೋಗುತ್ತವೆ.

ವಾಣರಾವ್‌ರವರು ಕತೆಯಾಗಿಸುವ ಪ್ರಸಂಗಗಳನ್ನು ಮೊದಲು ವಿವರವಾಗಿ ಹೇಳಬೇಕಾದದ್ದು ಅಗತ್ಯವಿದೆ. ಈ ಕಥಾ ಸಂಕಲನದ ಪರಿಚಯದ ದೃಷ್ಟಿಯಿಂದ ಇದು ಸೂಕ್ತ. ಈ ಹದಿನೇಳು ಕತೆಗಳಲ್ಲಿ ಬಹಳಷ್ಟು ಕತೆಗಳು ಹೇಳುವುದು ಮಿಲಿಟರಿ ಉದ್ಯೋಗದ ಪತಿ, ಅಥವಾ ಮಗ ಮತ್ತು ಮಿಲಿಟರಿ ಅಧಿಕಾರಿಯ ಪತ್ನಿ ಅಥವಾ ತಾಯಿಯ ಸುತ್ತ ಹೆಣೆದಿರುವ ಕತೆಗಳನ್ನೇ! ಗಂಡನನ್ನು ಕಳೆದುಕೊಳ್ಳುವ ಹೆಂಡತಿ, ಮಗನನ್ನು ಕಳೆದುಕೊಳ್ಳುವ ತಾಯಿ, ಇವರುಗಳ ಬದುಕಿನಲ್ಲಿ ಘಟನೆಗಳು (ಸಾಮಾನ್ಯರ ಬದುಕಿನಲ್ಲಿ ಅಪರೂಪ, ಅಥವಾ ವಿಚಿತ್ರ ಎನಿಸುವಂಥದ್ದು) ದಿಢೀರನೆ ಘಟಿಸಿ ಅದೇ ತುಂಬ ಸಹಜ ಎನಿಸುವಂತೆ ಮುಕ್ತಾಯವಾಗಿಬಿಡುತ್ತದೆ. ಉದಾ:- ಮೂಕಿ, ಹುಡುಗಿ ಅದೂ ಕೆಲಸದವಳಾಗಿ ಮನೆಗೆ ಬಂದವಳನ್ನು ಮಗ ಮದುವೆ ಮಾಡಿಕೊಳ್ಳುವುದು, ಕಣಿವೆಗಳಲ್ಲಿ ಯುವಕರು ಉಗ್ರವಾದಿಗಳಿಂದ ಅಪಹರಿಸಲ್ಪಡುವುದು, ವಿಮಾನಗಳು ಕಾಣೆಯಾಗುವುದು, ಕೊರಕಲುಗಳಲ್ಲಿ ಜೀವ ಉಳಿಸಿಕೊಳ್ಳುವುದಕ್ಕಾಗಿ ತೆವಳುತ್ತಾ ಬರುವುದು, ಇಂಥ ವಿಷಯಗಳು ಯಾವ ವೈಭವೀಕರಣವೂ ಇಲ್ಲದೆ ಅತ್ಯಂತ ನಿರ್ಲಿಪ್ತತೆಯಲ್ಲೇ ವರದಿಯಾಗುತ್ತಾ ಹೋಗುತ್ತವೆ.

ಈ ಸಂಕಲನದ ಕತೆಗಳನ್ನು ಮೂರು ವಿಭಾಗಗಳಾಗಿ ಸ್ಥೂಲವಾಗಿ ವಿಂಗಡಿಸಬಹುದು. ಒಂದು ಸೈನ್ಯದ ಬದುಕು ಮತ್ತು ಅವರ ಆಪ್ತರ ಬದುಕು ಎರಡು ಮಹಿಳೆಯರ ಬಗ್ಗೆಯೇ ಪ್ರಯತ್ನ ಪೂರ್ವಕವಾಗಿ ಬರೆದಿರುವ ಕತೆಗಳು ಮೂರು ಸಾಮಾನ್ಯ ವಸ್ತುವುಳ್ಳದ್ದು. ಲೇಖಕಿಯವರು ಹೆಚ್ಚು ಪ್ರಸ್ತುತವಾಗುವುದೂ ಭಿನ್ನವಾಗುವುದೂ ಸೈನ್ಯದವರ ಅವರ ಆಪ್ತರ ಕತೆಗಳನ್ನು ಹೇಳುವಾಗಲೇ. ಇದು ಅವರ ಅನುಭವದ ಆಳದಿಂದ ಹೊಮ್ಮುವಂತಹುದು. ಹಾಗಾಗಿ ಅಲ್ಲಿ ಭಾವುಕತೆ, ಆತ್ಮೀಯತೆ ಎಲ್ಲ ಚೆಂದದ ಹದದಲ್ಲಿ ಬೆರೆತು ಹೊಸ ಅನುಭವವನ್ನು ಕೊಡುತ್ತದೆ. ಉದಾಹರಣೆಗೆ 'ಕಣ್ಣುಮುಚ್ಚಾಲೆ' ಎನ್ನುವ ಸೈನಿಕ ರಾಮಣ್ಣನ ಕತೆ. ಸೈನ್ಯದಲ್ಲಿ ದೊಡ್ಡ ದೊಡ್ಡ ಹುದ್ದೆಯಲ್ಲಿರುವ ಅಧಿಕಾರಿಗಳ ಬದುಕು ಬಹಳಷ್ಟು ಬಣ್ಣ ಬಣ್ಣವಾಗಿ ಬಿತ್ತರಗೊಳ್ಳುತ್ತದೆ. ಅವರ ದೇಶಪ್ರೇಮ, ಶಕ್ತಿ ಹೋರಾಟ ಎಲ್ಲ ಕತೆಗಳಾಗಿ ಹೊರಹೊಮ್ಮುತ್ತದೆ. ಆದರೆ ರಾಮಣ್ಣನಂಥ ಸಾಮಾನ್ಯ ಸೈನಿಕನ ನೋವು ನಲಿವುಗಳು ಎಲ್ಲೂ ದಾಖಲಾಗುವುದೇ ಇಲ್ಲ. ಅನಾಥ ರಾಮಣ್ಣನ ಬದುಕು ಬವಣೆಗಳನ್ನು ಲೇಖಕಿ ತುಂಬ ಮಾರ್ಮಿಕವಾಗಿ ಹೇಳುತ್ತಾರೆ. ರಾಮಣ್ಣ ಸೈನ್ಯಕ್ಕೆ ಸೇರುವುದೂ ಕೇವಲ ದೈವವಶಾತ್! ಹಿಂದಿ ಭಾಷೆಯೇ ಬರದ ರಾಮಣ್ಣ ಬಬೀನಾದಲ್ಲಿ ಮೆಸ್‌ಗೆ ಹಾಲು ತರುತ್ತಿದ್ದ ಬಡಹುಡುಗಿ ನಿಮ್ಮೂವನ್ನು ಮದುವೆಯಾಗುವುದೂ ಆಕಸ್ಮಿಕವೇ. ರಾಮಣ್ಣನಿದ್ದ ಮದ್ರಾಸ್‌ರೆಜಿಮೆಂಟನ್ನು ಪಾಕೀಸ್ತಾನದ ಬಾರ್ಡರ್‌ಗೆ ಯುದ್ಧಕ್ಕೆ ಕಳಿಸುವುದೂ, ಈ ತುಕಡಿ ಪಾಕೀಸ್ತಾನದ ಕೆಲವು ಭೂ ಭಾಗಗಳನ್ನು ಗೆದ್ದುಕೊಂಡರೂ ತಾಷ್ಕೆಂಟ್ ಒಪ್ಪಂದದ ಪ್ರಕಾರ ಭಾರತ ಗೆದ್ದ ಭಾಗವನ್ನೆಲ್ಲಾ ವಾಪಸ್ ಕೊಡುವುದು, ಕೈದಿಯಾಗಿ ರಾಮಣ್ಣ ಪಾಕೀಸ್ತಾನದಲ್ಲಿ 7 ವರ್ಷ ಕೊಳೆತು, ಬದಲಾಯಿಸಿಕೊಂಡ ಕೈದಿಗಳ ಮೂರು ಲಿಸ್ಟ್‌ನಲ್ಲಿಯೂ ರಾಮಣ್ಣನ ಹೆಸರೇ ಇಲ್ಲದೆ, ನಂತರ ಮಿಸ್ಸಿಂಗ್ ಎಂದು ದಾಖಲಾಗಿ ಕ್ರಮೇಣ 'ಡೆಡ್' ಲಿಸ್ಟಿಗೆ ಸೇರಿಬಿಡುವುದು ಎಲ್ಲ ದುರಂತಗಳ ಸರಮಾಲೆಯೇ.

ಹೀಗೆ ಅನೇಕ ಕತೆಗಳು ನಮ್ಮದಲ್ಲದ ಪ್ರಪಂಚವನ್ನು ತೆರೆದಿಡುವಲ್ಲಿ ಫಲಕಾರಿಯಾಗಿದೆ. ಮಹಿಳೆಯರ ಬಗೆಗಿನ ಕತೆಗಳು, ಜಲಜಳ ಜಲಯಾನ, ಪ್ರಗತಿ ಮುಂತಾದವು ಅನುಭವದ ತೀವ್ರತೆ ತೆರೆದಿಡುವಲ್ಲಿ ಸೋತು ಹೋಗುತ್ತವೆ. ಜಲಯಾನದ ಬದುಕಾಗಲೀ, ಪತ್ರಿಕಾ ಪ್ರಪಂಚದ ಒಳ ವ್ಯವಸ್ಥೆಗಳಾಗಲೀ ಲೇಖಕಿ ಹೇಳಿರುವಷ್ಟು ಸರಳೀಕೃತವಾಗಿರುವುದಿಲ್ಲ ಎನ್ನುವುದು ಗಮನಿಸಬೇಕಾದ ವಿಷಯ. ಸಾಮಾನ್ಯ ವಸ್ತುವುಳ್ಳ ಅನಿರೀಕ್ಷಿತ, ದೃಷ್ಟಿ ಬಂಧನ ಮುಂತಾದ ಕತೆಗಳು ವಿಪರೀತ ಘಟನೆಗಳ ಭಾರದಿಂದ, ಕೇವಲ ವರದಿಯ ರೂಪದ ವಿವರಣೆಯಿಂದ, ಹೆಚ್ಚು ಪರಿಣಾಮಕಾರಿ ಎನಿಸುವುದಿಲ್ಲ. 'ಮಂಜಿನ ಮರೆಯಲ್ಲಿ ನೆನಪಿನ ಕಾಣಿಕೆ'ಯಂಥ ಅಪರೂಪದ ಪ್ರನಾಳ ಶಿಶುವಿನ ಬಗ್ಗೆಯಂಥ ಅಪರೂಪದ ವಸ್ತುವೂ ಚಿಂತನೆಯ ಕೊರತೆಯಿಂದ ಸೊರಗಿ ಹೋಗಿದೆ.

'ಗಗನ ಕುಸುಮ' ಕೆಲವು ವಿಚಾರಗಳಿಂದ ಗಮನಿಸಬಹುದಾದಂಥ ಕೃತಿಯಾಗಿದೆ. ಐವತ್ತು ವರ್ಷಗಳ ಅನುಭವ ಹಲವು ಗಮನಾರ್ಹ ಕತೆಗಳನ್ನು ಪರಿಪಕ್ವ ಮನಸ್ಥಿತಿಯಲ್ಲಿ ಮೂಡಿಸಿದೆ. ಇದು ಲೇಖಕಿಯ ಮೊದಲ ಕಥಾ ಸಂಕಲನವಾದರೂ ಅನುಭವ ಪಕ್ವತೆ, ಸಂಯಮ ಎಲ್ಲ ಕತೆಗಳಲ್ಲೂ ಎದ್ದು ತೋರುವ ಅಂಶ.

- ಶಾಂತಾ ನಾಗರಾಜ್

## ಈ ಬಾರಿ ಎರಡು ಪುಟ್ಟಕಥೆಗಳು :

**ಕಥೆ - 1**

ನಮ್ಮ ಪರಿಚಿತರ ಮಗಳಿಗೆ ಮದುವೆಯಾಯಿತು. ಮದುವೆಯಾದ ಮರುದಿನದಿಂದಲೇ ಅತ್ತೆ ಗಂಡ ಮಾವನಿಂದ ಹುಡುಗಿಗೆ ಕಿರುಕುಳ ಪ್ರಾರಂಭ. ವರದಕ್ಷಿಣೆಗಾಗಿ ಪೀಡಿಸುವುದು, ಅವಳ ಅಪ್ಪ ಅಮ್ಮಂದಿರನ್ನು ಆಡಿಕೊಳ್ಳುವುದು, ಹುಡುಗಿ ಕೂತರೆ ತಪ್ಪು, ನಿಂತರೆ ತಪ್ಪು. ಹುಡುಗಿಗೆ ಆರೇ ತಿಂಗಳಲ್ಲಿ ಹುಚ್ಚು ಹಿಡಿಯುವ ಪರಿಸ್ಥಿತಿ ನಿರ್ಮಾಣ! ತಂದೆ ತಾಯಿಯರು ಎಚ್ಚೆತ್ತರು. ಹುಡುಗಿಯನ್ನು ತಮ್ಮ ಮನೆಗೆ ಕರೆ ತಂದರು. ಕೋರ್ಟಿಗೆ ಹೋದರು. ವಿಚ್ಛೇದನ ಪಡೆದರು. ಹುಡುಗಿ ಜಾಣೆ. ಈ ಎಲ್ಲ ಕಿರುಕುಳದ ನಡುವೆಯೇ ಓದಿ ಎಂ.ಕಾಂ. ಪಾಸು ಮಾಡಿ ಬ್ಯಾಂಕಿನಲ್ಲಿ ನೌಕರಿ ಪಡೆದಳು. ಇಷ್ಟೇ ಆಗಿದ್ದರೆ ಈ ಸುದ್ದಿಗೆ ಏನೂ ಮಹತ್ವವಿಲ್ಲ. ಮುಂದಿನದು ಸ್ವಾರಸ್ಯ. ಹುಡುಗಿಯ ತಂದೆಗೆ ಆಪ್ತ ಸ್ನೇಹಿತರೊಬ್ಬರಿದ್ದರು. ಮಗಳಿಗೆ ವಿಚ್ಛೇದನ ಸಿಕ್ಕಿ ಮನಸ್ಸಿಗೆ ನಿರಾಳವಾದ ದಿನ ಆತ ತನ್ನ ಸ್ನೇಹಿತರಿಗೆ ಫೋನುಮಾಡಿ ವಿಷಯ ತಿಳಿಸಿ ತನ್ನ ಮನಸ್ಸಿನ ನಿರಾಳತೆಯನ್ನು ಹಂಚಿಕೊಂಡರು. ಅದೇ ದಿನ ಆ ಸ್ನೇಹಿತರ ಮನೆಯಲ್ಲಿ ರಾತ್ರಿ ಮನೆ ಮಂದಿಯೆಲ್ಲಾ ಕುಳಿತು ಊಟಮಾಡುತ್ತಿದ್ದ ಸಮಯದಲ್ಲಿ ಈ ಸುದ್ದಿಯೂ ಬಂತು. ಸ್ನೇಹಿತರ ಮದುವೆಗಿದ್ದ ಎರಡನೆ ಮಗ 'ಅಪ್ಪ ನೀವೆಲ್ಲ ಒಪ್ಪಿದರೆ ನಾನು ಆ ಹುಡುಗಿಯನ್ನು ಮದುವೆಯಾಗುತ್ತೇನೆ' ಅಂದ. ತಮಾಷೆಯೆಂದರೆ ಇದೇ ಭಾವ ಅದೇ ಸಮಯದಲ್ಲೇ ಮನೆ ಮಂದಿಯ ಮನಸ್ಸಿನಲ್ಲೆಲ್ಲಾ ಸುಳಿದಿದ್ದು. ಎಲ್ಲರೂ ಒಮ್ಮತದಿಂದ ಒಪ್ಪಿಕೊಂಡು ಊಟ ಮುಗಿದು ರಾತ್ರಿ 10 ಗಂಟೆಯಾಗಿದ್ದರೂ ಲೆಕ್ಕಿಸದೆ ಹುಡುಗಿಯ ಮನೆಗೆ ಧಾವಿಸಿ ವಿಷಯ ತಿಳಿಸಿದ್ದು, ಹುಡುಗಿಯ ಮನಸ್ಸು ಒಂದು ಮದುವೆಯಿಂದ ಆದ ಅನಾಹುತದಿಂದ ಕದಡಿರಾಡಿಯಾಗಿದ್ದು, ಅದು ತಿಳಿಯಾಗುವವರೆಗೆ ಈ ಜನ ಕಾದಿದ್ದು, ನಂತರ ಅತ್ಯಂತ ಸರಳವಾಗಿ ಮದುವೆಯೂ ಆಗಿ, ಈಗ ಹುಡುಗಿ ನೆಮ್ಮದಿಯಿಂದಿರುವುದು. ಇದು ಬಹುಶಃ ಯಾವ ಬೆಳ್ಳಿ ತೆರೆಗೂ ನಿಲುಕದ ಕಥೆ. ಹತ್ತು ಹುಡುಗರಲ್ಲಿ ಒಬ್ಬನಿಗಾದರೂ ಇಂಥ ಮನಸ್ಸಿದ್ದರೆ ತಮ್ಮ ತಪ್ಪೇ ಇಲ್ಲದೆ ನರಳುತ್ತಿರುವ ಹೆಣ್ಣುಮಕ್ಕಳಿಗೆ ಒಳ್ಳೆಯ ಬದುಕನ್ನು ಕೊಡಬಹುದಲ್ಲವೇ?

**ಕಥೆ 2**

ಆತ ಡಾಕ್ಟರ್. ಅವಳು ಇಂಟೀರಿಯಲ್ ಡೆಕೋರೇಟರ್. ಮದುವೆಯಾಯಿತು. ಕೆಲವೇ ದಿನಗಳಲ್ಲಿ ಆತನಿಗೆ ಅಮೆರಿಕೆಯ ವಿಶ್ವವಿದ್ಯಾಲಯದಲ್ಲಿ ಹೆಚ್ಚಿನ ವ್ಯಾಸಂಗಕ್ಕಾಗಿ ಸೀಟುಸಿಕ್ಕಿತು. ಇದ್ದ ಸರ್ಕಾರಿ ಉದ್ಯೋಗ ತ್ಯಜಿಸಿದ. ಅಮೆರಿಕೆಗೆ ಹಾರಲು ಸಿದ್ಧನಾದ. ಆದರೆ ವೀಸಾ ಕೊಡುವ ಮಂದಿ ಭಾರತೀಯ ವೈದ್ಯರನ್ನು ಅಮೆರಿಕದ ನೆಲ ಮೆಟ್ಟಲು ಬಿಲ್‌ಕುಲ್ ಬಿಡುವುದಿಲ್ಲವೆಂದರು. ಮುಂದೇನು? ಪ್ರಶ್ನೆ ಕಾಡಿತು. ಹೆಂಡತಿ ಹೇಳಿದಳು 'ಭಾರತದಲ್ಲೇ ಮುಂದೆ ಓದಿ, ಹೇಗೂ ನಾನು ದುಡಿಯುತ್ತೇನಲ್ಲ ನನ್ನ ಸಂಬಳದಲ್ಲೇ ನಿಭಾಯಿಸೋಣ' ಬೆಂಗಳೂರಿನ ಖಾಸಗಿ ಕಂಪನಿಯ ಉದ್ಯೋಗಸ್ಥೆಯಾಗಿರುವ ಅವಳಿಗೆ ಪರ್ಸ್ ಭಾರವಾಗುವಂತಹ ವೇತನವೇನೂ ಬರುವುದಿಲ್ಲ. ಆದರೂ ಅವರು ಖುಷಿಯಾಗಿದ್ದಾರೆ. ಆತ ಮನೆಯಲ್ಲಿ ಕುಳಿತು ಮುಂದಿನ ಓದಿನ ತಯಾರಿ ನಡೆಸಿದ್ದಾನೆ ಅವಳು ಅರ್ಧ ಅಡಿಗೆ ಮುಗಿಸಿ ಆಫೀಸಿಗೆ ಹೊರಡುತ್ತಾಳೆ. ಅವನು ಅದನ್ನು ಪೂರ್ತಿ ಮಾಡಿ ಮುಗಿಸುತ್ತಾನೆ. ಅವಳು ಆಫೀಸಿಗೆ ಹೊರಡುವ ಮುನ್ನ ಅವನು ಲೂನಾವನ್ನು ಸ್ಟಾರ್ಟ್ ಮಾಡಿ ಕಾಯುತ್ತಾ ನಿಂತಿದ್ದು ಅವಳು ಬಂದ ನಂತರ ಅವಳಿಗೆ ಒಪ್ಪಿಸುತ್ತಾನೆ. 2 ಗಂಟೆಗೆ ಊಟಕ್ಕಾಗಿ ಬಾಗಿಲಲ್ಲಿ ನಿಂತು ಅವಳಿಗಾಗಿ ಕಾಯುತ್ತಿರುತ್ತಾನೆ. ಅವನು ಹಳ್ಳಿಯಲ್ಲಿರುವ ತಂದೆತಾಯಿಗೆ ಕಾಗದ ಬರೆದಿಡುತ್ತಾನೆ. ಅವಳು ಆಫೀಸಿಗೆ ಹೋಗುತ್ತಾ Post ಮಾಡುವುದಾಗಿ ಹೇಳುತ್ತಾಳೆ. ಅವನು ಸಂಜೆ ಹೊತ್ತಿಗೆ ನೀಟಾಗಿ ಡ್ರೆಸ್ ಮಾಡಿಕೊಂಡು ಕಾಯುತ್ತಿರುತ್ತಾನೆ. ಬೆಳಗಿನಿಂದ ಓದಿ ಓದಿ ಚಿಟ್ಟು ಹಿಡಿದ ಮನಸ್ಸಿಗೆ ಫ್ರೆಶ್‌ನೆಸ್ ನೀಡಲು ಅವಳು ಬಂದ ತಕ್ಷಣ ವಾಕಿಂಗ್ ಹೊರಡುತ್ತಾರೆ. ಸಂಪ್ರದಾಯ ಬದ್ಧವಾಗಿ ವ್ಯವಸ್ಥೆಗೊಂಡ ಸಮಾಜದ ಸ್ಥಾನಗಳು ಇಲ್ಲಿ ಅದಲು ಬದಲಾಗಿದೆ. ಅಷ್ಟೆ. ಆದರೂ ಆಕಾಶವೇನೂ ಕಳಚಿಬಿದ್ದಿಲ್ಲ. ಅವನೇನೂ ಕುಸಿದಿಲ್ಲ. ಅವಳೇನೂ ಗರ್ವದಿಂದ ಗಂಡನನ್ನು ಧಿಕ್ಕರಿಸಿ ನಿಂತಿಲ್ಲ. ಖುಷಿ ಖುಷಿಯಾಗಿ ಬದುಕು ಸಾಗುತ್ತಿದೆ. ಮುಂದಿನ ಮಹತ್ವಾಕಾಂಕ್ಷೆಯ ಜೀವನಕ್ಕೆ ನೆಮ್ಮದಿಯಿಂದ ಸಿದ್ಧತೆ ನಡೆಸುತ್ತಿದ್ದಾರೆ.

*ಈ ಎರಡೂ ಕಥೆಗಳ ನಾಯಕರಂಥ ಆರೋಗ್ಯವಂತ ಮನಸ್ಸಿನ ಪುರುಷರನ್ನೇ ಅಲ್ಲವೇ ಸ್ತ್ರೀವಾದಿ ಸಮಾಜ ಬಯಸುತ್ತಿರುವುದು??*

*ಶತಬಿಷಾ*

# ರಂಗನಾಯಕಿ

ಮೇಕಪ್ಪು ರೂಮಿನಲ್ಲಿ
ನಟಿಗೆ ಅಲಂಕಾರ
ಕಾಡಿಗೆ ತೀಡಿದ ವಾರೆನೋಟ
ಹೆರೆದು ಕೊರೆದು ತಿದ್ದಿದ ಕಾಮನಬಿಲ್ಲು
ತುಟಿ ಮೇಲೆ ಕೆಂಪು ಮೆರುಗು
ಕನ್ನಡಿಯ ಮುಂದೆ
ಎಣೆಯಿಲ್ಲದ ಪ್ರೇಮದಲ್ಲಿ
ಬಿಂಬವ ಮೋಹಿಸಿದಳು.

ಮಗಳು ನಟಿಯಾಗಲೆಂಬುದು
ಅಪ್ಪ ಅಮ್ಮನ ಬಯಕೆ.
ಕೂತಾಗ ನಿಂತಾಗ ಉಡುಗೆ
ನಲುಗಬಾರದಂಥ ಎಚ್ಚರ
ಯತಿ ಪ್ರಾಸ ಭಂಗಿ ತಪ್ಪದೆ
ನಾಚಿಕೆ ಗಾಂಭೀರ್ಯ ಅಂಜಿಕೆ ಎಲ್ಲ
ಹದ್ದುಬಸ್ತಿನಲ್ಲಿಟ್ಟ ನವರಸ ಅಭಿನಯ.
ದೇಹಕ್ಕೊಪ್ಪುವ ಹೊಳಪು ಮಾಸದ ಉಡುಪು
ಸತ್ತಕೂದಲ ಸಿಂಬಿಸುತ್ತಿ ಜೋಡಿಸಿದ ತುರುಬು
ತೊಡುವ ಕಳಚುವ ನಿತ್ಯ ಪರಿಪಾಠಿ ನಡೆಸಿದರೆ
ಸಿದ್ಧ ರಂಗ ಪ್ರವೇಶಕ್ಕೆ.

ಪಾತ್ರ ನಾಯಕಿಯದು.
ಅವಳೋ ನಿರಂಕುಶ ನಿರ್ಭೀತ ಹೆಣ್ಣು
ಗಂಡಿನಂತೆಯೆ ನಡೆ ಗಂಡಿನಂತೆಯೆ ನುಡಿ
ತಲೆಬಾಗದ ನಿಲುವು ಠೀವಿ, ಗಾಂಭೀರ್ಯ
'ಎದೆಯೊಳದಿಂದ ಎಂಬಂತೆ ಗುಡುಗಿ ಮಾತಾಡಬೇಕು'
ಎಂದು ನಿರ್ದೇಶಕನ ಆಜ್ಞೆ.
ಹೆಣ್ಣು ವೇಷದೊಳಗೆ ನಿರ್ಭೀತ ನಿಲುವು
ಅಳವಡಿಕೆಗೆ ನಡೆಯಿತು ರಂಗತಾಲೀಮು.

ಸಿಟ್ಟಿನಿಂದ ಕಣ್ಣರಳಿಸಿದರೆ
ಕಾಡಿಗೆ ಕರಗಿ ಹೋದೀತೆಂಬ ಭೀತಿ
ಗತ್ತಿನಿಂದ ಮುಖ ತಿರುವಿದರೆ
ಮಿನುಗಿತೋ ಇಲ್ಲವೋ ವಜ್ರದ ಮೂಗುತಿ?
ಎದೆ ಬೆನ್ನು ಸೆಟೆಸಿ ದಾಪುಗಾಲಿಡಲೇ ಬೇಕು
ಹುಡುಗಿಯ ನವಿರುತನ ಜಾರಿಹೋದರೆ ಗತಿ?
ಮಧ್ಯೆ ಮಧ್ಯೆ ಆಹಾ ಹೊಳೆಯಿತನ್ನವೆ
ಆ ಹುಡುಗನ ಕಣ್ಣು?
ತೂಕದ ದಾಪುಗಾಲಿಟ್ಟಾಗ ಬಳುಕಿತು ನಡು
ಗಂಟಲೋ ಲತಾಮಂಗೇಷ್ಕರಳಷ್ಟೇ ಗಂಭೀರ.
ಅಭಿನಯ ಕೆಟ್ಟರೇನಂತೆ
'ಅಯ್ಯೋ ಚಿನ್ನ, ಸಿಟ್ಟುಗೊಂಡರೆ ನೀ ಮತ್ತು ಚೆನ್ನ'
ಗಂಡನ ಸಜ್ಜೆ ಮನೆ ಮಾತು ನೆನಪಾಗಿ
ಕೆನ್ನೆ ಕೆಂಪಾದದ್ದು ಅಭಿನಯವಿರಲಾರದು ಬಿಡಿ.

ಗತ್ತಿನಿಂದ ಹಿರಿಯಹೋದ ಕತ್ತಿ
ಕೈಜಾರಿ ಬಿದ್ದಾಗ
ಎತ್ತಿಕೊಡುವವರು ಭಟರ ವೇಷಧಾರಿಗಳು
ಕುದುರೆ ಏರುವಾಗ ಜನು ಹಿಡಿದಾಗ
ಪೋಷಾಕು ಮಾಸಿದರೆ ಮುದುಡಿದರೆ ಹರಿದರೆ
ತಿದ್ದಿಕೊಡುವವರು ದರ್ಜಿ ಧೋಬಿಗಳು

ನಡೆಯ ಬಳುಕಿಗೆ
ಪಾತ್ರದ ನಿಷ್ಠುರತೆ ಹೊಂದಿಸಲು
ಹೇಗಾದರೂ ಈಕೆ ಯತ್ನಿಸುವಳು.
ನಟಿತನ ಬಿಡದೆ
ಚೆನ್ನಮ್ಮನಾಗಲು ಬರದು,
ಚೆನ್ನಮ್ಮನಾಗದೆ ನಟನೆ ಹೋಗದು
ಎಂಬ ದ್ವಂದ್ವದಲ್ಲಿ
ರಂಗನಾಯಕಿಯಾದರೆ
ಇವಳತಪ್ಪೆ?

- ಸುಮಿತ್ರ

ಓದುಗರಲ್ಲಿ ವಿನಂತಿ,

ಪ್ರಿಯರೆ,

**ಹೊಸವರ್ಷದ ಶುಭಾಶಯಗಳು,**

ಕಳೆದ ಹನ್ನೊಂದು ವರ್ಷಗಳಿಂದ ನಿರಂತರವಾಗಿ ನಡೆದುಬರುತ್ತಿರುವ ಪತ್ರಿಕೆಯಾದ 'ಅಚಲ' ಮಹಿಳಾ ಜಾಗೃತಿಯ ಧ್ಯೇಹಕ್ಕೆ ಬದ್ಧವಾಗಿರುವ ದ್ವೈಮಾಸಿಕ. ಕರ್ನಾಟಕದ ಎಲ್ಲ ಭಾಗಗಳಲ್ಲಿ ನಮ್ಮ ಚಂದಾದಾರರಿದ್ದಾರೆ; ನಾಡಿನ ಅನೇಕ ಹಿರಿಯ, ಕಿರಿಯ ಚಿಂತಕರು, ವಿಚಾರವಂತರು, ಸಾಹಿತಿಗಳು ಅಭಿಮಾನವಿಟ್ಟು ನಮ್ಮ ಪತ್ರಿಕೆಗೆ ಲೇಖನಗಳನನ್ನು ಬರೆದು ಕೊಟ್ಟಿದ್ದಾರೆ, ಕೊಡುತ್ತಿದ್ದಾರೆ. ಹೀಗಾಗಿ ಆರಂಭದಿಂದ ಇಂದಿನವರೆಗೆ ಒಂದು ಉನ್ನತ ಮಟ್ಟದ ವೈಚಾರಿಕ ಲೇಖನಗಳನ್ನು, ಸಂಶೋಧನಾ ವರದಿಗಳನ್ನು ಹಲವು ಸಾಮಾಜಿಕ ಸಮಸ್ಯೆಗಳ ಚರ್ಚೆಯನ್ನು ಮಹಿಳೆಯರ ದೃಷ್ಟಿಯಿಂದ ನಾವು ಪ್ರಕಟಿಸುತ್ತಾ ಬಂದಿದ್ದೇವೆ.

ಆದರೆ ಧ್ಯೇಯಬದ್ಧ ಮಹಿಳಾ ಪತ್ರಿಕೆಗಳೇ ಅಭಾವವಾಗಿರುವ ಈ ನಾಡಿನಲ್ಲಿ 'ಅಚಲ' ದಂಥ ಪತ್ರಿಕೆಗೆ ಎಷ್ಟು ಪ್ರೋತ್ಸಾಹ ದೊರೆಯಬೇಕೋ ಅದು ಇದುವರೆಗೂ ದೊರೆತಿಲ್ಲ. ಚಂದಾಹಣವಲ್ಲದೆ ಬೇರೆ ಯಾವ ಆದಾಯಗಳೂ ನಮ್ಮ ಪತ್ರಿಕೆಗೆ ಇಲ್ಲ. ಆದ್ದರಿಂದ ಓದುಗರಲ್ಲಿ ನಾವು ವಿನಮ್ರವಾಗಿ ಭಿನ್ನವಿಸಿಕೊಳ್ಳುವುದೇನೆಂದರೆ ದಯವಿಟ್ಟು ಹೆಚ್ಚು ಹೆಚ್ಚು ಸಂಖ್ಯೆಯಲ್ಲಿ ನಮ್ಮ ಪತ್ರಿಕೆಗೆ ಚಂದಾದಾರರಾಗಿರಿ. ಈಗಾಗಲೇ ಚಂದಾದಾರರಾಗಿರುವವರು ದಯವಿಟ್ಟು ನವೀಕರಿಸಿರಿ. ಮಹಿಳಾ ಪ್ರಗತಿಯಲ್ಲಿ ಕಳಕಳಿ ಹೊಂದಿರುವ ದಾನಿಗಳು ಉದಾರವಾಗಿ ದಾನನೀಡುವ ಮೂಲಕ ಈ ಪತ್ರಿಕೆ ಸದಾ ಉಳಿದು ಬರುವಂಥ 'ಸ್ಥಾತಿನಿಧಿ' ಸ್ಥಾಪನೆಗೆ ನೆರವಾಗಬೇಕೆಂದು ಕೋರುತ್ತೇವೆ.

- *ಸಂಪಾದಕ ಮಂಡಳಿ*

## ಅಭಿನಂದನೆ

ಉತ್ತರ ಕರ್ನಾಟಕದ ಹಿರಿಯ ಕವಯತ್ರಿ ಶ್ರೀಮತಿ ಶೈಲಜಾ ಉಡುಚಣ ಅವರು ಕರ್ನಾಟಕ ಸಾಹಿತ್ಯ ಅಕಾಡೆಮಿಯ 1995ರ ಸಾಲಿನ ಗೌರವ ಪ್ರಶಸ್ತಿಯನ್ನು ಪಡೆದಿದ್ದಾರೆ. ಅದೇ ರೀತಿ ಮತ್ತೊಬ್ಬ ಹಿರಿಯ ಲೇಖಕಿ ಶ್ರೀಮತಿ ಚಿ.ನ. ಮಂಗಳ ಅವರಿಗೆ ಅತ್ತಿಮಬ್ಬೆ ಪ್ರತಿಷ್ಠಾನವು 'ಮನುಶ್ರೀ' ಪ್ರಶಸ್ತಿಯನ್ನು ನೀಡಿ ಗೌರವಿಸಿದೆ. ಈ ಇಬ್ಬರನ್ನೂ 'ಅಚಲ'ವು ಹೃತ್ಪೂರ್ವಕವಾಗಿ ಅಭಿನಂದಿಸುತ್ತದೆ.

ಡಾ॥ ಬಿ.ಎನ್. ಸುಮಿತ್ರಾ ಬಾಯಿಯವರ 'ವಿಚಯ' ವಿಮರ್ಶಾ ಕೃತಿಗೆ ಮತ್ತು ಡಾ॥ ಜಿ. ರಾಮಕೃಷ್ಣ ಅವರ 'ಆಯತನ' ವೈಚಾರಿಕ ಕೃತಿಗೆ 1995ನೇ ವರ್ಷದ ಉತ್ತಮ ಪುಸ್ತಕವೆಂದು ಕರ್ನಾಟಕ ಸಾಹಿತ್ಯ ಅಕಾಡೆಮಿ ಬಹುಮಾನ ಸಂದಿದೆ. ಅಚಲ ಬಳಗಕ್ಕೆ ಸಂದ ಈ ಗೌರವಕ್ಕೆ ನಾವು ಅಭಿನಂದಿಸಿ, ಹರ್ಷಿಸುತ್ತೇವೆ.

# ಮಹಿಳಾ ಮೀಸಲಾತಿ ಏಕೆ ವಿಳಂಬ?

ಪಂಚಾಯತ್ ರಾಜ್ ಸಂಸ್ಥೆಗಳ ಒಟ್ಟು ಸ್ಥಾನಗಳನ್ನು ಶೇಕಡ ಮೂರನೇ ಒಂದರಷ್ಟು ಸ್ಥಾನಗಳನ್ನು ಮಹಿಳೆಯರಿಗೆ ಮೀಸಲಿಡಬೇಕೆಂಬ ಕ್ರಮ ಈಗ ಜಾರಿಯಲ್ಲಿದೆ. ಅದರಂತೆ ಕಳೆದ ಪಂಚಾಯತ್ ಚುನಾವಣೆಗಳಲ್ಲಿ ಅಪಾರ ಸಂಖ್ಯೆಯಲ್ಲಿ ಮಹಿಳೆಯರು ಗೆದ್ದು ಬಂದು ಅಧಿಕಾರದ ಚುಕ್ಕಾಣಿ ಹಿಡಿದಿದ್ದು ಈಗ ಇತಿಹಾಸ. ಇದೇ ರೀತಿ ಲೋಕಸಭೆಯಲ್ಲಿ ಕೂಡ ಮಹಿಳೆಯರಿಗೆ ಶೇಕಡ ಮೂರನೇ ಒಂದರಷ್ಟು ಮೀಸಲಾತಿ ಇರಬೇಕೆಂಬ ಮಸೂದೆಯೊಂದು ಇದೀಗ ಸಂಸತ್ತಿನ ಮುಂದಿದೆ. ಈ ಮಸೂದೆಯು ಸಂಪತ್ತಿನ ಕಳೆದ ಅಧಿವೇಶನದಲ್ಲಿಯೇ ಅಂಗೀಕಾರವಾಗಿ ಬಿಡಬಹುದೆಂಬಷ್ಟು ಪ್ರಚಾರ ಅದಕ್ಕೆ ದೊರೆತಿತ್ತು. ಮಸೂದೆ ಅಂಗೀಕಾರವಾಗಿ ಬಿಟ್ಟಿತು ಎಂದೆನ್ನುಕೊಳ್ಳುತ್ತಿದ್ದಾಗಲೇ ಅದನ್ನು ಸಂಸತ್ ಸಮಿತಿಗೆ ಒಪ್ಪಿಸಲಾಗಿದೆ. ಅಂದರೆ ಮಸೂದೆ ಬಗೆಗೆ ಸರ್ಕಾರ ಮೀನಾಮೇಷ ಎಣಿಸುತ್ತಿದೆಯೇ? ಮಸೂದೆ ರೂಪಿಸುವಾಗ ಇದ್ದ ಉತ್ಸಾಹ, ಇಚ್ಛಾ ಶಕ್ತಿಯಂತೂ ಅದಕ್ಕೆ ಈಗ ಇರುವಂತೆ ಕಾಣದು. ಬಹುಶಃ ಮಸೂದೆಯ ಬಗೆಗೆ ಅವಸರ ಬೇಡ ಎಂಬ ಒತ್ತಡ ಅದಕ್ಕೆ ಬಂದಿರಬಹುದು.

ಇಷ್ಟಕ್ಕೂ ಮಸೂದೆಯಲ್ಲಿ ಇರುವುದಾದರೂ ಏನು? ಲೋಕಸಭೆಯಲ್ಲಿ ಈಗಿರುವ ಮಹಿಳಾ ಸದಸ್ಯರ ಸಂಖ್ಯೆ 36. ಮೀಸಲು ಮಸೂದೆ ಅಂಗೀಕಾರವಾದರೆ, ಕನಿಷ್ಠ 180 ಮಹಿಳಾ ಸದಸ್ಯರು ಲೋಕ ಸಭೆ ಪ್ರವೇಶಿಸುತ್ತಾರೆ. ಮಹಿಳೆಯರ ಧ್ವನಿ ನಿಜಕ್ಕೂ ಸದನದಲ್ಲಿ ಕೇಳಿಸುತ್ತದೆ. ಈಗ ಕೇವಲ ಕೆಲವೇ ಮಹಿಳಾ ಸದಸ್ಯರು ತಮ್ಮ ಅಸ್ತಿತ್ವವನ್ನು ಸ್ಥಾಪಿಸಿಕೊಂಡಿದ್ದಾರೆ. ಅವರ ಸಂಖ್ಯೆ 180ಕ್ಕೆ ಏರುವುದಾದರೆ ಅವರ ಧ್ವನಿ ಇನ್ನೂ ಏರುಮುಖವಾದೀತು. ಅನಾದಿಕಾಲದಿಂದಲೂ ಇತ್ಯರ್ಥವಾಗದೆ ಉಳಿದಿರುವ ಅನೇಕ ಮಹಿಳಾ ಸಮಸ್ಯೆಗಳಿಗೆ ಶಾಶ್ವತ ಪರಿಹಾರ ಕಂಡುಕೊಳ್ಳುವಲ್ಲಿ ಇಂಥ 180ರ ದೊಡ್ಡ ಸಂಖ್ಯೆ ಖಂಡಿತಾ ನೆರವಾದೀತು. ಅಲ್ಲದೆ ಅಧಿಕಾರದ ಚುಕ್ಕಾಣಿ ಹಿಡಿದ ಸಂದರ್ಭವೂ ಬಂದೊದಗಿ ಶುದ್ಧ ಆಡಳಿತ ಸಮಸ್ಯೆಗಳ ಪರಿಹಾರದತ್ತ ದೃಢಹೆಜ್ಜೆ ಇಡಬಹುದೆಂಬ ಆಶಾಕಿರಣವೂ ಇದೆ.

ಆದರೆ ಈಗಿರುವ ಸದಸ್ಯೆಯರು ಎಷ್ಟರಮಟ್ಟಿಗೆ ಮಹಿಳಾ ಸಮಸ್ಯೆಗಳಿಗೆ ಸ್ಪಂದಿಸುತ್ತಿದ್ದಾರೆ ಎಂಬುದೂ ಒಂದು ಪ್ರಶ್ನೆ. ಬೆರಳೆಣಿಕೆಯಷ್ಟನ್ನೂ ಬಿಟ್ಟರೆ, ಉಳಿದಂತೆ ಅನೇಕ ಸದಸ್ಯೆಯರು ಸಂಸತ್ತಿನಲ್ಲಿ ಧ್ವನಿ ಎತ್ತಿರುವುದು ಅಪರೂಪವೇ. ಇಂಥ ಸಂದರ್ಭದಲ್ಲಿ ಅವರ ಸಂಖ್ಯೆ ಏರಿಬಿಟ್ಟರೆ ಧ್ವನಿ ಜೋರಾಗಿಬಿಡುತ್ತದೆಯೇ? ನಿಜ, ಮಹಿಳಾ ಮೀಸಲಾತಿಯನ್ನು ಸ್ವಾಗತಿಸುವಷ್ಟೇ ನಾವು ಮಹಿಳಾ ಸದಸ್ಯೆಯರತ್ತ ಎಚ್ಚರಿಕೆಯ ಗಂಟೆಯನ್ನೂ ಬಾರಿಸುತ್ತೇವೆ. ಸದಸ್ಯೆಯರು ಹೋರಾಟಗಾರರಾಗಬೇಕು, ಗೃಹಿಣಿಯರಿಗೆ ವಾರದ ರಜೆ ಮುಂತಾದ ವಿಷಯಗಳತ್ತ ಹೆಚ್ಚು ಗಮನ ಹರಿಸುವುದಕ್ಕಿಂತ ಮಹಿಳೆಯರ ಆರೋಗ್ಯ, ಬಾಲಕಿಯರಿಗೆ ಸರಿಯಾದ ಶಾಲೆ, ಮಹಿಳೆಯರಿಗೆ ಸಂಬಂಧಿಸಿದಂತೆ, ಕಾನೂನುಗಳ ಜಾರಿ, ಬನ್ವರಿದೇವಿ ಪ್ರಕರಣದಲ್ಲಿ ಒಗ್ಗಟ್ಟಿನ ಹೋರಾಟ, ರೂಪ್‌ಕನ್ವರ್ ಘಟನೆಯಂಥವು ಮರುಕಳಿಸದಂತೆ ಮಾಡುವ ದೃಢ ಪ್ರತಿಜ್ಞೆ ಇವೇ ಮುಂತಾದುವನ್ನು ಅವರು ಮಾಡಬೇಕೆಂದು ನಾವು ಆಶಿಸುತ್ತೇವೆ. ಮಹಿಳಾ ವಿಷಯಗಳು ಸಂಸತ್ತಿನಲ್ಲಿಯೇ ಆಗಲಿ, ರಾಜ್ಯ ವಿಧಾನ ಸಭೆಗಳಲ್ಲಿಯೇ ಆಗಲಿ ಮೂಲೆಗುಂಪಾಗುತ್ತಿರುವುದು ಸ್ಪಷ್ಟ. ಮಹಿಳೆಯರೇ ಹೆಚ್ಚಿನ ಸಂಖ್ಯೆಯಲ್ಲಿ ಇರುವಂಥ ಸದನದಲ್ಲಿ ಹೀಗಾಗದು ಎಂಬ ದೃಢ ವಿಶ್ವಾಸ, ನಮ್ಮದು. ಇಂದಿನ ಚುನಾವಣೆ ಪರಿಸ್ಥಿತಿಯಲ್ಲಿ ಮಹಿಳೆಯರು ಇಚ್ಛೆ ಇದ್ದರೂ ಸ್ಪರ್ಧಿಸಲು ಹಿಂಜರಿಯುತ್ತಾರೆ. ನಿಜವಾದ ಸಾಮಾಜಿಕ ಕಳಕಳಿಯ, ಅರ್ಪಣಾಭಾವದ ಅನೇಕ ಮಹಿಳೆಯರಿಗೆ ಪುರುಷ ಪ್ರಧಾನವಾದ ಪ್ರಮುಖ ಪಕ್ಷಗಳ 'ಟಿಕೆಟ್' ಸಿಗುವುದೇ ಇಲ್ಲ. ಸ್ವತಃ ಸ್ಪರ್ಧಿಸಲಿಕ್ಕೂ ನಾನಾ ಅಡ್ಡಿ ಆತಂಕಗಳು. ಪಕ್ಷಗಳ ಅಸಹಕಾರ, ದುಬಾರಿ ಚುನಾವಣೆ ವೆಚ್ಚ ಇತ್ಯಾದಿ ಸಂಕೋಲೆಗಳು. ಹೀಗಾಗಿ ಮೀಸಲಾತಿ ಇದ್ದರೆ ಅನೇಕ ಕ್ಷೇತ್ರಗಳು ಅವರಿಗೆ ದೊರೆತಾವು.

ಮೀಸಲು ಮಸೂದೆಯನ್ನು ವಿರೋಧಿಸುವವರೂ ಇದ್ದಾರೆ. ಅಪಾರ ಸಂಖ್ಯೆಯಲ್ಲಿ, ಪ್ರಮುಖ ರಾಜಕೀಯ ಪಕ್ಷಗಳಲ್ಲಿ, ಮೀಸಲಾತಿ ಜಾರಿಗೆ ಬಂದರೆ ಪಕ್ಷಗಳ ನಿಜವಾದ ಕಾರ್ಯಕರ್ತನಿಗೆ ಪೆಟ್ಟು ಬೀಳುತ್ತದೆ; ಅವನ ಕ್ಷೇತ್ರವನ್ನು ಮೀಸಲು ಎಂದು ಹೆಸರಿಸಿಬಿಟ್ಟರೆ ಅಲ್ಲಿ ಮಹಿಳೆಯೇ ನಿಂತು ಗೆಲ್ಲಬೇಕು. ಪಕ್ಷದ ನಿಷ್ಠಾವಂತ ಕಾರ್ಯಕರ್ತನಿಗೆ ಅಲ್ಲಿ ನಿಲ್ಲಲಾಗದೆ ಬೇರೆ ಕ್ಷೇತ್ರಕೊಟ್ಟರೆ, ಅಲ್ಲಿ ಆತ ಹೊಸಬನಾಗಿ ಜನರು ಅವನನ್ನು ಸ್ವೀಕರಿಸದೆಯೂ ಹೋಗಬಹುದು. ಇದು ಅವನಿಗಾಗುವ ಅನ್ಯಾಯ ಎಂಬುದು ಇವರ ವಾದ. ಅಲ್ಲದೆ, ಕ್ಷೇತ್ರವಾರು ವಿಂಗಡನೆ ಹೇಗೆ ಸಾಧ್ಯ? ಎಲ್ಲಿ ಮಹಿಳಾ ಮತದಾರರ ಸಂಖ್ಯೆ ಹೆಚ್ಚಾಗಿರುತ್ತದೆ ಎಂದು ಪ್ರಶ್ನಿಸುವವರೂ ಇದ್ದಾರೆ. ಮೀಸಲಾತಿ ಎಂಬ ಕಾರಣಕ್ಕಾಗಿಯೇ ಮಹಿಳೆಯನ್ನು ನಿಲ್ಲಿಸಿ, ಆಕೆ ತನ್ನ ತಂದೆಯ ಅಥವಾ ಗಂಡನ 'ಮುದ್ರೆ' ಯಾಗುವಂಥ ಪರಿಸ್ಥಿತಿ ಏಕೆ? ಆಗ ಮೀಸಲಾತಿ ನಗೆಪಾಟಲಾದೀತು ಎಂದು ವಿರೋಧಿ ಗುಂಪು ವಾದಿಸುತ್ತದೆ. ಆದರೆ ಇಂಥ ಹಸ್ತಕ್ಷೇಪವನ್ನು ಯಾರೂ ವಿರೋಧಿಸುತ್ತಾರೆ ಎಂಬುದನ್ನು ಅವರು ಮರೆತಿರುವಂತಿದೆ. ಸ್ವತಃ ಗೆದ್ದು ಬರುವ ಮಹಿಳೆಯೇ ತಾನು ಯಾರ ಆದೇಶಕ್ಕೂ ಒಳಗಾಗುವುದಿಲ್ಲ ಎಂಬ ದೃಢಮನಸ್ಕಳಾಗಿರುತ್ತಾಳೆಂಬುದನ್ನು ಈ ಮಹನೀಯರು ಅರಿತಿಲ್ಲವೇನೋ?

ಮೀಸಲು ವಿರೋಧಿಗಳ ಒತ್ತಡದಿಂದ ಸರ್ಕಾರ ತನ್ನ ಮೊದಲ ಉತ್ಸಾಹ ಕಳೆದುಕೊಂಡಿದೆಯೇನೋ ಎಂಬ ಅನುಮಾನ ಈಗ ಬರುವುದು ಸಹಜ. ಮಸೂದೆ ವಿಳಂಬವಾಗುತ್ತಿರುವುದೇ ಇದಕ್ಕೆ ಕಾರಣ. ಈಗ ಸರ್ಕಾರದ ಉದ್ದೇಶದ ಬಗೆಗೇ ಶಂಕೆಗಳು ಮೂಡುತ್ತವೆ. ವಿವಿಧ ರಾಜಕೀಯ ಪಕ್ಷಗಳೂ ಆಸಕ್ತಿ ತೋರುತ್ತಿಲ್ಲ ಎಲ್ಲ ಸಿದ್ಧವಾಗಿದ್ದ ಮಸೂದೆಯನ್ನು ಮತ್ತೆ ಸಂಸತ್ ಸಮಿತಿಗೆ ಒಪ್ಪಿಸಿದ್ದೇಕೆ? ಇಂಥ ವಿಳಂಬಕ್ಕೆ ಸರ್ಕಾರ ಉತ್ತರಿಸಬೇಕಾದುದು ಅಗತ್ಯ.

- ಎನ್. ಗಾಯತ್ರಿ ದೇವಿ.

# ಕಂಬನಿ

ಸೆಪ್ಟೆಂಬರ್ 2, 1994ರಂದು ಫ್ಲೈಟ್ ಕ್ಯಾಡೆಟ್ ಹರಿತಾ ಕೌರ್ ದೇವಲ್ ಆವ್ರೋ ಎಚ್.ಎಸ್.-748 ವಿಮಾನವನ್ನು ಏಕಾಂಗಿಯಾಗಿ ಹಾರಿಸಿದ ವಾಯುಪಡೆಯ ಮೊಟ್ಟ ಮೊದಲ ಮಹಿಳಾ ವಿಮಾನ ಚಾಲಕಿಯಾದರು. ಡಿಸೆಂಬರ್ 24, ವಾಯುಪಡೆಯ ಆವ್ರೋ ವಿಮಾನವೊಂದು ಆಂಧ್ರ ಪ್ರದೇಶದ ನೆಲ್ಲೂರ್ ಬಳಿ ದುರ್ಘಟನೆಗೀಡಾಯಿತು. ಈ ವಿಮಾನದ ಸಹ-ವಿಮಾನ ಚಾಲಕಿಯಾಗಿದ್ದ ಹರಿತಾ ಉಳಿದ 22 ಮಂದಿಯೊಂದಿಗೆ ಸಾವಿಗೀಡಾದರು. ಭಾರತದ ಮಹಿಳೆಯರಿಗೆ ಹೆಮ್ಮೆ ತಂದ ಹರಿತಾ ಅತ್ಯಂತ ಚಿಕ್ಕ ವಯಸ್ಸಿನಲ್ಲಿ ದುರ್ಮರಣಕ್ಕೀಡಾದದ್ದು ದೊಡ್ಡ ದುರಂತ. ತಮ್ಮ ಸಾಧನೆಯಿಂದ ದೇಶಕ್ಕೆ ಹೆಮ್ಮೆ ಎನಿಸಿದ್ದ ಭಾರತದ ಮಹಿಳೆಯರನ್ನು ಸೇನೆಯತ್ತ, ನೀಲಿ ಆಕಾಶದತ್ತ ಕರೆದ ಹರಿತಾ ಅವರ ಸಾವಿಗೆ 'ಅಚಲ' ಕಂಬನಿ ಮಿಡಿಯುತ್ತದೆ.

---

**Reg. No. MAG (5) PRC, DEGL 036/89/87**
BOOK POST/Periodicals

To,

*If Undelivered please return to :*
**Jagruthi Mahila Adhyayana Kendra**
401, Vijay Tower, 2nd Main, RPC Layout
Vijayanagar, II Stage, Bangalore-560 040.

**ACHALA** - Edited by N. Gayathri, Published by Dr. G. Ramakrishna on behalf of Jagruthi Mahila Adhyayana Kendra, 26, 1st Main Road, Vyalikaval, Bangalore-03. Typeset & Printing by **AKSHARA PRINTERS**, B'lore-4. Ph.: 624082